ಹರಿಹರ ಕವಿಯ

# ಸವರಾಜದೇವರ ರಗಳೆ



ಸಂಪಾದಕ :

ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

ಕನ್ನಡದ ಪ್ರೊಫೆಸರ್, ಮಹಾರಾಜರವರ ಕಾಲೇಜು, ಮೈಸೂರು





ಕನ್ನಡ ವಿಶ್ವವಿದ್ಯಾಲಯ, ಹಂಪಿ
ಗ್ರಂಥಾಲಯ.

ಮೈಸೂರು :

ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿತವಾದದ್ದು

೧೯೩೦

ಈ ಗ್ರಂಥವು

ನನ್ನ ವಿದ್ಯಾಗುರುಗಳಾದ

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ. ಎ., ಬಿ. ಎಲ್.

ಅವರಿಗೆ

ಭಕ್ತಿಯಿಂದ ಅರ್ಪಿತವಾಗಿದೆ



# ವಿಷಯಾನುಕ್ರಮಣಿಕೆ

# ಪೀಠಿಕೆ

## ೧. ಈ ಕಾವ್ಯದಲ್ಲಿ ಬಸವಣ್ಣನವರ ಚರಿತ್ರೆ

'ಬಸವರಾಜದೇವರ ರಗಳೆ' ಎಂಬ ಈ ಕಾವ್ಯವು ಬಸವಣ್ಣನವರ ಜೀವನ ಚರಿತ್ರೆಯನ್ನು ತಿಳಿಸುವ ಗ್ರಂಥಗಳಲ್ಲಿ ಒಂದಾಗಿದೆ. ಆತನ ಚರಿತ್ರೆಯನ್ನು ತಿಳಿಸುವ ಅನೇಕ ಪುರಾಣಗಳು ಈಗ ದೊರೆತಿದ್ದರೂ ಆತನ ಜೀವನಕ್ಕೆ ಸಂಬಂಧಿಸಿದ ನಿಜವಾದ ಸಂಗತಿಗಳು ಯಾವುವು ಎಂಬುದು ಇನ್ನೂ ನಿಶ್ಚಿತವಾಗಿಲ್ಲ. ಈ ಗ್ರಂಥವು ಬಹಳ ಪ್ರಾಚೀನವಾದದ್ದೆಂದೂ ಹರಿಹರಕೃತವೆಂದೂ ಗೊತ್ತಾಗುವುದರಿಂದ ಬಸವಣ್ಣನವರ ಚರಿತ್ರೆಯನ್ನು ಇತಿಹಾಸದ ದೃಷ್ಟಿಯಿಂದ ನಿರ್ಧರಿಸುವುದಕ್ಕೆ ವಿಶೇಷವಾಗಿ ಸಹಾಯಮಾಡತಕ್ಕದ್ದಾಗಿರುತ್ತದೆ. ಅಲ್ಲದೆ ಇದು ಒಂದು ಹೊಸ ರೂಪದ ಸಾಹಿತ್ಯಗ್ರಂಥ. ಇದರಲ್ಲಿ ಒಂದು ಸ್ಥಲವು ರಗಳೆಯ ಛಂದಸ್ಸಿನಲ್ಲಿಯೂ ಇನ್ನೊಂದು ಗದ್ಯದಲ್ಲಿಯೂ ಹೀಗೆ ಸ್ಥಲಗಳು ಒಂದಾದಮೇಲೊಂದು ಅನುಕ್ರಮವಾಗಿ ಬರುತ್ತವೆ. ಈ ತೆರದ ಗ್ರಂಥವು ಯಾವುದೂ ಇದುವರೆಗೆ ಪ್ರಕಟವಾಗಿಲ್ಲ. ಕಾವ್ಯದೃಷ್ಟಿಯಿಂದಲೂ ಈ ಗ್ರಂಥವು ಗೌರವಾರ್ಹವಾಗಿದೆ. ವಸ್ತುರಚನೆ, ಪಾತ್ರಪೋಷಣೆ, ವರ್ಣನೆ, ಶೈಲಿ ಮೊದಲಾದುವುಗಳಲ್ಲಿ ಈ ಕಾವ್ಯವು ಉದ್ಗ್ರಂಥಗಳೆಂದು ಹೊಗಳಿಸಿಕೊಳ್ಳುತ್ತಿರುವ ಅನೇಕ ಕಾವ್ಯಗಳಿಗಿಂತಲೂ ಶ್ರೇಷ್ಠತರವಾಗಿರುತ್ತದೆ. ಈ ಕಾರಣಗಳಿಂದ ಈ ಗ್ರಂಥವನ್ನು ಕನ್ನಡಿಗರ ಗಮನಕ್ಕೆ ತರುವುದು ಆವಶ್ಯಕವೆಂದು ಭಾವಿಸಿ ನಮಗೆ ಸಮಗ್ರ ಗ್ರಂಥವು ದೊರೆಯದಿದ್ದರೂ ದೊರೆತಷ್ಟು ಭಾಗವನ್ನೇ ಪ್ರಕಟಿಸಿರುತ್ತೇವೆ.

ಪ್ರಖ್ಯಾತರಾದ ಕರ್ನಾಟಕದ ಧರ್ಮವೀರರಲ್ಲಿ ಬಸವಣ್ಣನವರೂ ಒಬ್ಬರು. ಅವರು ಮೊದಲು ಬ್ರಾಹ್ಮಣರಾಗಿದ್ದು ಆಮೇಲೆ ಬ್ರಾಹ್ಮಣ್ಯವನ್ನು ನಿರಾಕರಣ ಮಾಡಿ ವೀರಶೈವಮತ[1]ವನ್ನವಲಂಬಿಸಿ ತಮ್ಮ ಜೀವನವನ್ನೆಲ್ಲ ಆ ಮತದ

---

[1] ವೀರಶೈವರಲ್ಲಿ ಮೂರು ಪಂಗಡಗಳಿರುವಂತೆ ಕಾಣುತ್ತದೆ. (೧) ಆಂಧ್ರದೇಶದಲ್ಲಿರುವ ವೀರಶೈವ ಆರಾಧ್ಯ ಬ್ರಾಹ್ಮಣರು—ಇವರು ಬ್ರಾಹ್ಮಣರ ವೈದಿಕ ಕರ್ಮಗಳು, ವೀರಶೈವ ಧರ್ಮ, ಈ ಎರಡನ್ನೂ ಇಟ್ಟುಕೊಂಡಿರುವಂತೆ ತಿಳಿಯಬರುತ್ತದೆ. (೨) ಪಂಚಾಚಾರ್ಯ ಪಂಗಡದವರು—ಇವರು ಆಗಮವಿರುದ್ಧವಾದ ವೈದಿಕ ಕರ್ಮಗಳನ್ನು ನಿರಾಕರಣಮಾಡು

ಉದ್ಧಾರಕಕ್ಕಾಗಿ ಧಾರೆಯೆರೆದರು. ತಾವು ಸ್ವತಃ ಪರಮನಿಷ್ಠಾಯುಕ್ತರಾದ ಶಿವಭಕ್ತರಾಗಿದ್ದು ಅನೇಕ "ಪವಾಡ"ಗಳನ್ನು ಮೆರೆದದ್ದಲ್ಲದೆ ಬಿಜ್ಜಳರಾಜನ ಹತ್ತಿರ ಉನ್ನತಪದವಿಯಲ್ಲಿದ್ದು ತಮ್ಮ ತನುಧನಮನಗಳನ್ನೆಲ್ಲ ಜಂಗಮಾರಾಧನೆಗಾಗಿಯೂ ಮತಪ್ರಚಾರಕಾರ್ಯಕ್ಕಾಗಿಯೂ ಸವೆಸಿ ವೀರಶೈವಮತೋದ್ಧಾರಕರಲ್ಲಿ ಅಗ್ರಗಣ್ಯರಾದರು. ಅವರ ಜೀವಿತಕಾಲದಲ್ಲಿಯೇ ಅವರ ಕೀರ್ತಿ ನಾಲ್ಕುಕಡೆಗೂ ಹಬ್ಬಿ ಅನೇಕ ಶಿವಭಕ್ತರು ಅವರ ಸಂದರ್ಶನಕ್ಕಾಗಿ ದೇಶವಿದೇಶಗಳಿಂದ ಬರುತ್ತಿದ್ದರೆಂದು ತಿಳಿದುಬರುತ್ತದೆ. ದೈವಭಕ್ತಿಯುಳ್ಳವರೂ ಮಹಿಮಸಂಪನ್ನರೂ ಆದವರನ್ನು ಅವತಾರಪುರುಷರೆಂದು ಪರಿಗಣಿಸುವುದು ನಮ್ಮ ಜನರಲ್ಲಿ ಬಹುಕಾಲದಿಂದ ವಾಡಿಕೆಯಾಗಿರುವುದರಿಂದ ಆ ಕಾಲದಲ್ಲಿಯೇ ಶಿವಭಕ್ತರು ಬಸವಣ್ಣನವರನ್ನು ಅವತಾರಪುರುಷರೆಂದು ಭಾವಿಸಿದ್ದರೆಂಬುದರಲ್ಲಿ ಸಂದೇಹವಿಲ್ಲ. ಬಸವಣ್ಣನವರು ಕಾಲವಾದ ಮೇಲೆ ವೀರಶೈವಮತವು ಹಬ್ಬಿದ ಹಾಗೆಲ್ಲ ಅವರ ಕೀರ್ತಿಯೂ ಅವರ ಸಂಬಂಧದ ಕಥೆಗಳೂ ಜನರಲ್ಲಿ ಬೆಳೆಯುತ್ತಾ ಹೋಗಿರಬೇಕು.

ಬಸವಣ್ಣನವರ ಜೀವನಚರಿತ್ರೆಯನ್ನು ತಿಳಿಸುವ ಪುರಾಣಗಳನ್ನು ರಚಿಸಿದ ವೀರಶೈವಕವಿಗಳು ಯಾರೂ ಬಸವಣ್ಣನವರನ್ನು ಕಂಡಿರಲಿಲ್ಲ; ಅವರ ಹತ್ತಿರವಿದ್ದು ಅವರ ವಿಚಾರಗಳನ್ನು ಕಣ್ಣಿಂದ ನೋಡಿ ತಿಳಿದಿದ್ದ ಜನಗಳ ಪರಿಚಯವೂ ಅವರಿಗೆ ಇರಲಿಲ್ಲ. ಈಗ ತಿಳಿದಿರುವುದರಲ್ಲಿ ಅತ್ಯಂತ ಪ್ರಾಚೀನವಾದದ್ದೆಂದು ಗೊತ್ತಾಗಿರುವುದು ತೆಲುಗು ಬಸವಪುರಾಣ.[1] ಅದನ್ನು ರಚಿಸಿದ ಪಾಲ್ಕುರಿಕೆ ಸೋಮನಾಥನು ಹನ್ನೆರಡನೆಯ ಶತಮಾನದ ಅಂತ್ಯದಲ್ಲಿದ್ದನೆಂದು ವಿದ್ವಾಂಸರು ಅಭಿಪ್ರಾಯಪಡು

---

ತ್ತಾರೆ; ಆದರೆ ಜಾತಿಭೇದವನ್ನು ಒಪ್ಪುತ್ತಾರೆಂದು ತಿಳಿಮಬರುತ್ತದೆ. (೩) ಇತರ ವೀರಶೈವರು—ಇವರನ್ನು ಬಸವೇಶ್ವರಮತಾನುಯಾಯಿಗಳೆಂದು ಕರೆಯಬಹುದು. ಇವರು ಜಾತಿಭೇದವನ್ನು ಅಂಗೀಕರಿಸುವುದಿಲ್ಲ. ವೀರಶೈವದೀಕ್ಷೆ ಯಾದವರೆಲ್ಲರೂ ಸರಿಸಮಾನರು ಎಂಬುದು ಇವರ ಮತ. ಈ ಗ್ರಂಥದಲ್ಲಿ ವೀರಶೈವರು ಎಂಬ ಪದವನ್ನು ಮೇಲೆ ಹೇಳಿದ ಮೂರನೆಯ ಪಂಗಡದವರನ್ನುದ್ದೇಶಿಸಿ ಪ್ರಯೋಗಿಸಿರುತ್ತೇವೆ.

[1] ಮಲಬಸವರಾಜಚಾರಿತ್ರ ಅಥವಾ ಸಿಂಗಿರಾಜಪುರಾಣವನ್ನು ಬರೆದ ಸಿಂಗಿರಾಜನು ಬಸವಣ್ಣನವರ ಸಮಕಾಲಿಕನೆಂದೂ ಆತನ ಗ್ರಂಥವೇ ಅತ್ಯಂತ ಪ್ರಾಚೀನವೂ ವಿಶ್ವಾಸಾರ್ಹವೂ ಆದದ್ದೆಂದೂ ಮ|| ರಾ|| ಹಾರ್ಡೇಕರ್ ಮಂಜಪ್ಪನವರು ಅಭಿಪ್ರಾಯಪಟ್ಟಿರುತ್ತಾರೆ (ಶ್ರೀ ಬಸವ ಚರಿತ್ರೆ). ಈ ಕವಿಯ ಕಾಲವು ಸುಮಾರು ಕ್ರಿ. ಶ. ೧೫೦೦ ಎಂದು ಕರ್ಣಾಟಕ ಕವಿಚರಿತೆಯಲ್ಲಿ ಹೇಳಿದೆ. ಆದಕಾರಣ ಇದು ಇನ್ನೂ ಚರ್ಚಾಸ್ಪದವಾದ ವಿಷಯವಾಗಿ ಉಳಿದಿದೆ. ಸಿಂಗಿರಾಜನು ಅಷ್ಟು ಪ್ರಾಚೀನನಲ್ಲವೆಂದು ತೋರುತ್ತದೆ.

ತ್ತಾರೆ; ಆತನು ಇದ್ದದ್ದು ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಎಂದು ಅನುಮಾನಿಸುವುದಕ್ಕೂ ಅವಕಾಶವಿದೆ. ಅದು ಏನೇ ಆಗಲಿ, ಸೋಮನಾಥನಿಗೆ ಬಸವಣ್ಣನವರ ಪರಿಚಯವಿರಲಿಲ್ಲ. ಪುರಾತನ ಭಕ್ತರಿಂದ ಕೇಳಿದ ಕಥೆಯನ್ನು ಅವಲಂಬಿಸಿ ತಾನು ಬಸವಪುರಾಣವನ್ನು ರಚಿಸಿದಂತೆ ಆತನೇ ಹೇಳಿಕೊಂಡಿರುತ್ತಾನೆ.[1] ಆದದ್ದರಿಂದ ಬಸವಣ್ಣನವರು ಕಾಲವಾದ ಅನೇಕ ವರ್ಷಗಳಮೇಲೆ ಸೋಮನಾಥನು ಗ್ರಂಥರಚನೆಮಾಡಿದನೆಂದು ಗೊತ್ತಾಗುತ್ತದೆ. ಈ ತೆಲುಗು ಗ್ರಂಥವನ್ನು ಅನುಸರಿಸಿ ಭೀಮಕವಿ ಕನ್ನಡದಲ್ಲಿ ಬಸವಪುರಾಣವನ್ನು ರಚಿಸಿದನು. ಆತನ ಕಾಲ ಹದಿನಾಲ್ಕನೆಯ ಶತಮಾನ. ಮಿಕ್ಕ ಪುರಾಣಗಳೆಲ್ಲವೂ ಆದರಿಂದ ಈಚೆಯವು. ಅಂತು ವೀರಶೈವಕವಿಗಳು ಬಸವಣ್ಣನವರ ವಿಷಯವಾಗಿ ಜನರಲ್ಲಿ ಪ್ರಚಾರದಲ್ಲಿದ್ದ ಕಥೆಗಳ ಆಧಾರದಮೇಲೆ ಪುರಾಣಗಳನ್ನು ರಚನೆಮಾಡಿದರು. ಜನರ ಬಾಯಲ್ಲಿ ಕಥೆ ಬೆಳೆಯುವಾಗ ಅದರಲ್ಲಿ ವ್ಯತ್ಯಾಸಗಳಾಗುವುದು ಸ್ವಾಭಾವಿಕ. ಕವಿಗಳು ತಮಗೆ ಸೂತ್ರತೋರಿದಂತೆ ಕಾವ್ಯದ ಸೊಬಗನ್ನು ಹೆಚ್ಚಿಸುವುದಕ್ಕಾಗಿಯೋ ಕಥಾನಾಯಕನ ಮಹತ್ವವನ್ನು ಉಜ್ವಲಗೊಳಿಸುವುದಕ್ಕಾಗಿಯೋ ಕೆಲವು ವ್ಯತ್ಯಾಸಗಳನ್ನು ಮಾಡಿಕೊಳ್ಳುವುದೂ ಅಸಂಭವವಲ್ಲ. ವೀರಶೈವಕವಿಗಳು ಪುರಾಣರಚನೆಮಾಡಿದ್ದು ಭಕ್ತಿಯಿಂದ, ಭಕ್ತರಿಗಾಗಿ. ಬಸವಣ್ಣನವರ ಅಲೌಕಿಕವಾದ ಮಹಿಮೆಯನ್ನು ತೋರಿಸುವುದೇ ಅವರ ಮುಖ್ಯೋದ್ದೇಶವಾಗಿತ್ತು. ಬಸವಣ್ಣನವರ ಜೀವನದಲ್ಲಿ ನಿಜವಾಗಿ ನಡೆದ ಸಂಗತಿಗಳು ಯಾವುವೆಂಬುದನ್ನು ಅವರು ಪರಿಶೋಧನೆಮಾಡಿದಂತೆ ತೋರುವುದಿಲ್ಲ. ಹಾಗೆ ಮಾಡುವುದು ಅವರ ಉದ್ದೇಶವಾಗಿಯೂ ಇರಲಿಲ್ಲ. ಆದಕಾರಣ ಈ ಪುರಾಣಗಳಲ್ಲಿ ಹೇಳಿರುವುದನ್ನೆಲ್ಲ ನಿಜವಾದ ಸಂಗತಿಯೆಂದು ನಂಬಲಾಗುವುದಿಲ್ಲ. ಅಲ್ಲದೆ ಈ ಪುರಾಣಗಳಲ್ಲಿ ಪರಸ್ಪರ ವ್ಯತ್ಯಾಸಗಳು ಅನೇಕವಿವೆ. ಇವುಗಳಲ್ಲಿ ನಿಜವಾದ ಸಂಗತಿಗಳೂ ಕಲ್ಪಿತಕಥೆಗಳೂ ಸಂಮಿಶ್ರವಾಗಿರುತ್ತವೆ; ನಿಜವಾದ ಸಂಗತಿಗಳು ಬಣ್ಣ ಬದಲಾಯಿಸಿರುವ ಸಂಭವವೂ ಉಂಟು.

---

[1] ಆತತ ಬಸವಪುರಾತನಭಕ್ತ ಗೀತಾರ್ಥಸಮಿತಿಯೇ ಮಾತೃಕ ಗಾಗ|
ಬೂರಿತಂ ಬೈ ಯೊಪ್ಪು ಪೂಸಲಲೋನ ದಾರಂಬುಕ್ರಿಯ ಬುರಾತನಭಕ್ತವಿತತಿ|
ಚರಿತಲಲೋಪಲ ಸಂಧಿಲ್ಲ ಬಸವ ಚರಿತ ಮೇ ವರ್ಣಿಂತು ಸತ್ಕೃತಿ ಯನಗ||
(ಬಸವಪುರಾಣ—ಪ್ರಥಮಾಶ್ವಾಸ)
...........................ಪ್ರಸ್ತುತಿಕೆಕ್ಕಿನ ಬಸವನಿಚರಿತ|
ಜೆಪ್ಪಿತಿ ಭಕ್ತುಲಚೇವಿನ್ನ ಮಾಡ್ಕಿ ದಪ್ಪಕುಂಡಗನು ಯಥಾಶಕ್ತಿ ಜೇಸಿ||
(ಬಸವಪುರಾಣ—ಸಪ್ತಮಾಶ್ವಾಸ)

ಬಸವಣ್ಣನವರ ಜೀವನಚರಿತ್ರೆಯನ್ನು ತಿಳಿದುಕೊಳ್ಳಲು ಇರುವ ಮುಖ್ಯ ಸಾಧನಗಳು ಎರಡು[1]—೧. ವೀರಶೈವಪುರಾಣಗಳು ೨. ಬಸವಣ್ಣನವರ ಮತ್ತು ಅವರ ಸಮಕಾಲಿಕರ ವಚನಗಳು. ಪುರಾಣಗಳಂತೆ ಕಾಲಕ್ರಮದಲ್ಲಿ ವ್ಯತ್ಯಾಸವನ್ನು ಹೊಂದುವ ಸಂಭವವು ವಚನಗಳಲ್ಲಿ ಕಡಿಮೆಯಾದದ್ದರಿಂದ ಅವು ಪುರಾಣಗಳಿಗಿಂತಲೂ ಹೆಚ್ಚು ವಿಶ್ವಾಸಾರ್ಹವಾದುವು. ಆದರೆ ಅವುಗಳಲ್ಲಿ ಬಸವಣ್ಣನವರ ಜೀವನಚರಿತ್ರೆಗೆ ಸಂಬಂಧಿಸಿದ ಬಾಹ್ಯಸಂಗತಿಗಳು ಬಂದಿರುವುದು ಬಹು ಸ್ವಲ್ಪ. ವಚನಗಳಿಂದ ತಿಳಿದುಬರುವ ಸಂಗತಿಗಳನ್ನೂ ಪುರಾಣಗಳಲ್ಲಿ ಹೇಳಿರುವ ಸಂಗತಿಗಳನ್ನೂ ಸಮನ್ವಯಮಾಡಿಕೊಂಡು ಅವರ ನಿಜವಾದ ಜೀವನಚರಿತ್ರೆಯನ್ನು ನಿರ್ಮಿಸಬೇಕಾಗಿದೆ. ವಚನಗಳಲ್ಲಿ ಇಲ್ಲದಿರುವ ಸಂಗತಿಗಳ ವಿಷಯದಲ್ಲಿ ಪುರಾಣಗಳಲ್ಲಿ ಹೇಳಿರುವುದನ್ನೇ ಪ್ರಮಾಣವಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಈ ಪುರಾಣಗಳಲ್ಲಿ ಪರಸ್ಪರ ವ್ಯತ್ಯಾಸವಿದ್ದಾಗ ಈಚೆಯ ಪುರಾಣಗಳಿಗಿಂತಲೂ ಹಿಂದಿನ ಪುರಾಣಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಬೇಕಾಗುತ್ತದೆ. ಒಂದು ಪುರಾಣವು ಎಷ್ಟು ಹಿಂದಿನದೋ ಅಷ್ಟು ವಿಶ್ವಾಸಾರ್ಹವಾದದ್ದೆಂದು ಸ್ಥೂಲವಾಗಿ ಹೇಳಬಹುದು. ಈಗ ದೊರೆತಿರುವ ಬಸವಣ್ಣನವರ ಚರಿತ್ರರೂಪವಾದ ಪುರಾಣಗಳಲ್ಲೆಲ್ಲ ಬಸವರಾಜದೇವರ ರಗಳೆಯೇ ಅತ್ಯಂತ ಪ್ರಾಚೀನವಾದದ್ದೆಂದು ತೋರುತ್ತದೆ.[2] ಹೀಗೆ ಈ ರಗಳೆ ಬಹುಪ್ರಾಚೀನವಾಗಿರುವುದು ಮಾತ್ರವಲ್ಲದೆ ವೀರಶೈವಕವಿಗಳಲ್ಲಿ ಅತ್ಯಂತ ಪ್ರಖ್ಯಾತನಾದ ಹರಿಹರನಿಂದ ರಚಿತವಾದ

---

[1] ಕೆಲವರು ಜೈನಕವಿಗಳು ಬರೆದಿರುವ ಬಿಜ್ಜಳಚರಿತ್ರೆಯಲ್ಲಿ ಪ್ರಾಸಂಗಿಕವಾಗಿ ಬಂದಿರುವ ಬಸವಣ್ಣನವರ ಚರಿತ್ರೆಗೆ ಆಧುನಿಕ ಚರಿತ್ರಕಾರರಲ್ಲಿ ಕೆಲವರು ಹೆಚ್ಚು ಬೆಲೆಯನ್ನು ಕೊಟ್ಟಿರುತ್ತಾರೆ. ಈ ಕವಿಗಳು ಗ್ರಂಥರಚನೆಮಾಡಿದ್ದು ಬಸವಣ್ಣನವರು ಕಾಲವಾದ ಅನೇಕ ಶತಮಾನಗಳಮೇಲೆ. ಅವರ ಕಥೆಗಳಿಗೆ ಆಧಾರವೇನೆಂಬುದೂ ಗೊತ್ತಾಗುವುದಿಲ್ಲ. ಆದಕಾರಣ ಇವನ್ನು ಪ್ರಮಾಣವಾಗಿ ಗ್ರಹಿಸುವುದು ಸಂಗತವಲ್ಲವೆಂದು ತೋರುತ್ತದೆ.

ಇದುವರೆಗೆ ಗೊತ್ತಾಗಿರುವುದರಲ್ಲಿ ಶಾಸನಗಳಿಂದ ಬಸವಣ್ಣನವರ ಜೀವನಚರಿತ್ರೆಗೆ ಸಂಬಂಧಿಸಿದ ಸಂಗತಿಗಳು ತಿಳಿದುಬರುವುದು ಅತ್ಯಲ್ಪ.

[2] ಹರಿಹರ, ಸೋಮನಾಥ—ಇವರಿಬ್ಬರ ಕಾಲವೂ ನಿಶ್ಚಿತವಾಗಿ ಗೊತ್ತಿಲ್ಲ. ಹರಿಹರನ ಕಾಲ ಕ್ರಿ. ಶ. ೧೧೬೦, ಸೋಮನಾಥನ ಕಾಲ ಕ್ರಿ. ಶ. ೧೧೯೫ ಎಂಬುದು ಒಂದು ಮತ. ಹರಿಹರನ ಕಾಲ ಹದಿಮೂರನೆಯ ಶತಮಾನದ ಮಧ್ಯ ಅಥವಾ ಪೂರ್ವಾರ್ಧ, ಸೋಮನಾಥನ ಕಾಲ ಹದಿಮೂರನೆಯ ಶತಮಾನದ ಅಂತ್ಯ ಅಥವಾ ಉತ್ತರಾರ್ಧ ಎಂಬುದು ಇನ್ನೊಂದು ಮತ. ಹೇಗೂ ಹರಿಹರನು ಸೋಮನಾಥನಿಗಿಂತಲೂ ಒಂದೆರಡು ತಲೆಮೊರೆ ಹಿಂದಿನವನಾಗುತ್ತಾನೆ.

ದ್ದಾಗಿರುವುದರಿಂದ ಐತಿಹಾಸಿಕದೃಷ್ಟಿಯಿಂದ ಬಸವಣ್ಣನವರ ಚರಿತ್ರೆಯನ್ನು ನಿರ್ಣಯಿಸುವಾಗ ಈ ಗ್ರಂಥದಲ್ಲಿ ಹೇಳಿರುವ ಸಂಗತಿಗಳಿಗೆ ತಕ್ಕಷ್ಟು ಪ್ರಾಮಾಣ್ಯವನ್ನು ಕೊಡಲೇಬೇಕಾಗುತ್ತದೆ.

ಹರಿಹರನೂ ಮಿಕ್ಕ ವೀರಶೈವಕವಿಗಳಂತೆಯೇ ತಾನು ಕೇಳಿದ ಕಥೆಯನ್ನು ಬರೆದಿರುವನೆಂದು ಇಟ್ಟುಕೊಳ್ಳಬಹುದು. ಇಲ್ಲಿ ಹೇಳಿರುವ ಕಥೆಗೂ ಈಗ ಪ್ರಚಾರದಲ್ಲಿರುವ ಮಿಕ್ಕ ಪುರಾಣಗಳ ಕಥೆಗೂ ಕೆಲವು ಮುಖ್ಯವಾದ ಸಂಗತಿಗಳಲ್ಲಿ ವ್ಯತ್ಯಾಸವಿದೆ. ಈ ಗ್ರಂಥವು ಸಮಗ್ರವಾಗಿ ದೊರೆಯದೆ ಸುಮಾರು ಅರ್ಧದಷ್ಟು ದೊರೆತಿರುವುದರಿಂದ ಈ ಭಾಗದಲ್ಲಿ ಕಂಡುಬರುವ ಬಹುಮುಖ್ಯವಾದ ಕೆಲವು ವ್ಯತ್ಯಾಸಗಳನ್ನು ಇಲ್ಲಿ ಕೊಟ್ಟಿದೆ:

೧. ಇತರ ಪುರಾಣಗಳಲ್ಲಿ ಬಸವಣ್ಣನವರು ಈಶ್ವರನ ವಾಹನವಾದ ವೃಷಭನ ಅವತಾರವೆಂದು ಹೇಳಿದೆ; ಇಲ್ಲಿ ಆತನು ವೃಷಭಮುಖನೆಂಬ ಪ್ರಮಥನೆಂದು ಹೇಳಿದೆ (ಸ್ಥಲ ೧).

೨. ಬಸವಣ್ಣನವರಿಗೆ ಉಪನಯನವಾಗಬೇಕಾದ ಸಂದರ್ಭವು ಬಂದಾಗ ಅವರು ತಮ್ಮ ತಂದೆಯೊಡನೆ ವಾದಿಸಿ ಉಪನಯನಕ್ಕೆ ಒಪ್ಪದೆ ಹೊರಟು ಹೋದರೆಂದು ಇತರ ಪುರಾಣಗಳಲ್ಲಿ ಹೇಳಿದೆ. ಈ ರಗಳೆಯಲ್ಲಿಯಾದರೋ ಬಸವಣ್ಣನವರ ತಂದೆತಾಯಿಗಳು ಬಾಲ್ಯದಲ್ಲಿಯೇ ಸತ್ತುಹೋಗಿದ್ದರೆಂದೂ (ಸ್ಥಲ ೨) ಬಸವಣ್ಣನವರು "ಶಿವಭಕ್ತಿ ಮುತ್ತಂತಿರ್ದ ಮುತ್ತಜ್ಜಿಯ ಪಕ್ಕ"ದಲ್ಲಿ ಬೆಳೆದರೆಂದೂ ಹದಿನಾರು ವರ್ಷ ವಯಸ್ಸಾದಮೇಲೆ "ಶಿವಭಕ್ತಿಯುಂ ಕರ್ಮಮುಂ ಎಂದುವೊಂದಾಗಿರದು" ಎಂದು "ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಜನಟು" ಬಾಗೆವಾಡಿಯಿಂದ ಹೊರಟುಹೋದರೆಂದೂ ಹೇಳಿದೆ. ಇದರಿಂದ ಬಸವಣ್ಣನವರಿಗೆ ಉಪನಯನವಾಗಿತ್ತೆಂದೂ ಉಪನಯನದ ಕಾಲದಲ್ಲಿ ಬಹುಶಃ ಅವರ ತಂದೆತಾಯಿಗಳು ಬದುಕಿರಲಿಲ್ಲವೆಂದೂ ಗೊತ್ತಾಗುತ್ತದೆ.

೩. ಸಂಗಮೇಶ್ವರನು ಜಂಗಮರೂಪನಾಗಿ ಬಂದು ಬಸವಣ್ಣನವರಿಗೆ ದೀಕ್ಷೆಕೊಟ್ಟಂತೆ ಇತರ ಪುರಾಣಗಳಲ್ಲಿ ಹೇಳಿದೆ. ಈ ರಗಳೆಯಲ್ಲಿ ಈಶ್ವರನ ವಾಹನವಾದ ವೃಷಭನು ಗುರುವಾದನೆಂದು (ಸ್ಥಲ ೪) ಹೇಳಿದೆ. "ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು ಸಂಗಮೇಶ್ವರಲಿಂಗಮಂ ಛೋಂಕನೆ ಬಿಜಯಂಗೆಯ್ಸಿ....ಮುಖಮಂಡಲಮಂ ಬಸವನ ಮಸ್ತಕದೊಳಿಟ್ಟು ಪಂಚಾಕ್ಷರಿಯ ಸಂಜಮನಱಿಪಿ ಅಮೃತಮಯಲಾಲಾಜಲದೊಳಭಿಷೇಚನಮನಲಂಕರಿಸಿ ಸತ್ಯೋಪದೇಶಮಂ ಶಾಂತಮಯಂಗೆ ಮಾಡಿ........ನಂದೀಶ್ವರಂ

ಸಂಗಮೇಶ್ವರಂಗೆಱಗಿ ಮುನ್ನಿನಂತೆ ಶಿವಲಿಂಗ ಶ್ರೀಪಾದ ನಿರಂತರಾವಳೋಕ" ನಾದನೆಂದು ವರ್ಣಿತವಾಗಿದೆ. ಇದರಿಂದ ಬಸವಣ್ಣನವರು ಲಿಂಗಧಾರಣೆ ಮಾಡಿದ್ದು ಕಪ್ಪಡಿ ಸಂಗಮವನ್ನು ಬಿಟ್ಟು ಬಿಜ್ಜಳನ ರಾಜಧಾನಿಗೆ ಹೋಗುವ ಸಮಯದಲ್ಲಿ ಎಂಬದೂ ತಿಳಿದುಬರುತ್ತದೆ.

೪. ಇತರ ಪುರಾಣಗಳಲ್ಲಿ ಬಸವಣ್ಣನವರು ತಮ್ಮ ಸೋದರಮಾವನಾದ ಬಲದೇವಮಂತ್ರಿಯ ಮಗಳನ್ನು ಮದುವೆಯಾದರೆಂದೂ ಬಲದೇವನ ಮರಣಾನಂತರ ಆತನ ಅಧಿಕಾರವು ಬಸವಣ್ಣನವರಿಗೆ ದೊರೆಯಿತೆಂದೂ ಹೇಳಿದೆ. ಈ ರಗಳೆಯಲ್ಲಿ ಬಲದೇವನ ಹೆಸರೇ ಇಲ್ಲ. ಬಸವಣ್ಣನವರು ಮೊದಲು ಬಿಜ್ಜಳನ ಭಂಡಾರಿಯಾದ ಸಿದ್ಧದಂಡೇಶನಲ್ಲಿ ವರ್ಷಕ್ಕೆ ೧೦೧ ಹೊನ್ನಿನ ಜೀವಿತವನ್ನು ಪಡೆದರೆಂತಲೂ ಸಿದ್ಧದಂಡಾಧೀಶನು ಅವರನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ "ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ| ನೆಲೆ ವಿಚಾರಿಸೆ ತನ್ನ ಸಂಬಂಧವೊಂದಾಗೆ" ತನ್ನ ಮನೆಯಲ್ಲಿಯೇ ಇಟ್ಟುಕೊಂಡು ತನ್ನ ಆಡಳಿತವನ್ನೆಲ್ಲ ಅವರಿಗೆ ಒಪ್ಪಿಸಿದನೆಂದೂ ಕೆಲವು ಕಾಲವಾದಮೇಲೆ ಆತನು ಸಾಯಲು ಬಸವಣ್ಣನವರು ಆತನನ್ನು "ಬಿಜ್ಜಳಾದೇಶದಿಂ| ದೊಯ್ದು ಸಂಸ್ಕರಿಸಿ........ಸಿದ್ಧದಂಡಾಧಿಪಂ ಹೊಂದಿದನಪುತ್ರಕಂ| ಬುದ್ಧಿಗೊಡುವುದು ಬಾಳ್ಕೆಗೆಂದು" ಕೇಳಿಕೊಳ್ಳಲು ಬಿಜ್ಜಳನು ಆತನ ಆಸ್ತಿಯೆಲ್ಲವನ್ನೂ ಆತನ ಅಧಿಕಾರವನ್ನೂ ಬಸವಣ್ಣನವರಿಗೆ ಕೊಟ್ಟನೆಂದೂ ಹೇಳಿದೆ (ಸ್ಥಲ ೫). ಈ ಅಧಿಕಾರ ಪ್ರಾಪ್ತಿಯಾದ ಕೆಲವು ದಿನಗಳಮೇಲೆ ಬಸವಣ್ಣನವರು "ಸತ್ಕುಲಸಾದೃಶ್ಯ ಸುಶೀಲೆಯರಪ್ಪ ಗಂಗಾದೇವಿ ಮಾಯಿದೇವಿಯರೊಡತಣ ವಿವಾಹಸಂಪದದಿಂ ಸಂತಸುಖ"ವಾಗಿದ್ದರೆಂದು ಹೇಳಿದೆ.

ಇವಲ್ಲದೆ ಇನ್ನೂ ಕೆಲವು ವ್ಯತ್ಯಾಸಗಳುಂಟು. ಅವು ಅಷ್ಟು ಮುಖ್ಯವಲ್ಲವೆಂದು ಭಾವಿಸಿ ಅವನ್ನು ಇಲ್ಲಿ ನಿರೂಪಿಸಿಲ್ಲ.

## ೨. ಗ್ರಂಥಕರ್ತೃ

'ಶರಣ ರಗಳೆ', 'ನಂಬಿಯಣ್ಣನ ರಗಳೆ' ಎಂಬ ಹೆಸರುಳ್ಳ ಕೈಬರೆಹದ ಎರಡು ರಗಳೆಗಳ ಸಂಕಲನಗಳಲ್ಲಿ ಬಸವರಾಜದೇವರ ರಗಳೆ ದೊರೆಯುತ್ತದೆ. ಈ ಸಂಕಲನಗಳಲ್ಲಿರುವ ರಗಳೆಗಳಲ್ಲಿ ಕೆಲವು ಹರಿಹರಕೃತವಾದುವು; ಕೆಲವು ಹರಿಹರನವಲ್ಲ, ಬೇರೆ ಕವಿಗಳು ರಚಿಸಿದುವು; ಇನ್ನೂ ಕೆಲವು ಹರಿಹರಕೃತವೆಂದು ಸುಪ್ರಸಿದ್ಧ

ವಾದುವಲ್ಲ, ಆದರೆ ಆತನವೇ ಎಂದು ತೋರುವುವು. ಬಸವರಾಜದೇವರ ರಗಳೆ ಈ ಮೂರನೆಯ ಗುಂಪಿಗೆ ಸೇರಿದ್ದು.

ಹರಿಹರಕೃತವೆಂದು ಸುಪ್ರಸಿದ್ಧವಾಗಿರುವುವು ಅರುವತ್ತುಮೂವರು[1] ಪುರಾತನರ ರಗಳೆಗಳು; ಇವನ್ನು ತಾನು ರಚಿಸಿರುವುದಾಗಿ ಹರಿಹರನೇ ತಿರುನೀಲಕಂಠರ ರಗಳೆಯ ಆದಿಯಲ್ಲಿ ತಿಳಿಸಿರುತ್ತಾನೆ.[2] ಹರಿಹರನವಲ್ಲದ ರಗಳೆಗಳ ಸಂಖ್ಯೆ ಕಡಿಮೆ; ಅವು ಆತನವಲ್ಲವೆಂದು ಅವುಗಳ ಅಂಕಿತ ಮೊದಲಾದುವುಗಳಿಂದ ತಿಳಿದುಬರುತ್ತದೆ. ಉದಾಹರಣೆಗೆ, ಗಂಗೋತ್ಪತ್ತಿಯ ರಗಳೆಯಲ್ಲಿ ಅದು ಪಾಲ್ಕುರಿಕೆ ಸೋಮನಾಥನದೆಂದು ಸ್ಪಷ್ಟವಾಗಿ ಉಕ್ತವಾಗಿದೆ; ಪುನರ್ದೀಕ್ಷೆಯ ರಗಳೆಯಲ್ಲಿ "ಶಂಕರಲಿಂಗ" ಎಂಬ ಅಂಕಿತವೂ ಚೋಳಿಯಕ್ಕನ ರಗಳೆ, ಅಮ್ಮವ್ವೆಯ ರಗಳೆ ಎಂಬಿವುಗಳಲ್ಲಿ "ಗುರು ವಿಶ್ವೇಶ" ಎಂಬ ಅಂಕಿತವೂ ದೊರೆಯುತ್ತವೆ. ಹರಿಹರಕೃತವೆಂದು ಸುಪ್ರಸಿದ್ಧವಲ್ಲದಿದ್ದರೂ ಆತನವೆಂದು ತೋರುವ ರಗಳೆಗಳ ಸಂಖ್ಯೆ ಹೆಚ್ಚು[3]; ರಚನಾಕ್ರಮದಲ್ಲಿಯೂ ಅಂಕಿತದಲ್ಲಿಯೂ ಅರುವತ್ತುಮೂವರು ಪುರಾತನರ ರಗಳೆಗಳಿಗೂ ಇವಕ್ಕೂ ವಿಶೇಷವಾದ ಹೋಲಿಕೆ ಇರುವುದರಿಂದ ಇವು

---

[1] ಈ ಪುರಾತನರು ಅರುವತ್ತುಮೂವರೆಂದು ಉಕ್ತರಾಗಿದ್ದರೂ ನಿಜವಾಗಿಯೂ ಅವರ ಸಂಖ್ಯೆ ಅರುವತ್ತಾರೆಂದು 'ಅಱುವತ್ತುಮೂವರ ಕಥಾಗರ್ಭ'ದ ಕೊನೆಯಲ್ಲಿರುವ ಈ ವಾಕ್ಯಗಳಿಂದ ಗೊತ್ತಾಗುತ್ತದೆ:—

"ಮತ್ತಂ ಅಱುವತ್ತು ಮೂಱನೆಯವರು ಹಿಂದಿಬ್ಬರೊಂದಾಗಿ ಮೆಱೆದ ಎಡಗಣ ಪೆರುಮಾಳೆಯರು ಕೂಡಿ ಅಱುವತ್ತುಮೂವರು ಪುರಾತನರು. ಮತ್ತಂ ಲೋಕಂ ದಣಿಯೆ ಹೊಗಳೆ ಹೊನ್ನ ಮಳೆಯಂ ಕಱಸಿದ ಕರಿಕಾಲ ಚೋಳ, ಕೈಳಾಸಮಂ ಸೂಱೆಗೊಂಡ ನಂಬಿಯಕ್ಕಂಗಳು, ಶಿವನಂ ದಣಿಯೆ ಊಡಿಸಿದ ಮಾದರ ಚೆನ್ನಯ್ಯಂಗಳೊಳಗಾಗಿ ಚೋಳದೇಶದ ಅಱುವತ್ತಾಱು ಪ್ರಜೆ ಪುರಾತನರು. ಇಂತು ಶಿವನೊಳು ಶಂಕರನೊಳು ಪರಮಭಕ್ತಿಯಿಂ ಶರೀರಂ ಬೆರಸಿ ಸಂದ ಅಱುವತ್ತುಮೂವರ ದಿವ್ಯಚರಿತ್ರಮಂ ಹಂಪೆಯ ಮಾದರಸರ ಕಾರುಣ್ಯದ ಶಿಶು ಹಂಪೆಯ ಹರಿಹರದೇವಂ ಬಿನ್ನಪಂಗೆಯ್ದ ಪುರಾಣಮಂ ಸಕಲ ಭಕ್ತರು ಸುಚಿತ್ತದಿಂದ ವಧರಿಸುವುದೆಂತೆಂದೊಡೆ—"

[2]
ನೋಡಲೆ ಹಂಪೆಯ ಪ್ರಭುವಿನೊಳ್ ಸಲೆ ಸಂದಱುವತ್ತುಮೂವರಂ
ಕೂಡೆ ಜಗಜ್ಜನಂ ಬಯಸಿ ಬಣ್ಣಿಸುತಿಪ್ಪಱುವತ್ತುಮೂವರಂ |
ಪಾಡುತನಾಡುತಂ ಪೊಗಳ್ವೆನುನ್ನತಿವೆತ್ತಱುವತ್ತುಮೂವರಂ
ಬೇಡಿತನೀವರಂ ಸುಕೃತಜೀವನಪ್ರತಿಮಪ್ರಭಾವರಂ ||

[3] ಬಸವರಾಜದೇವರ ರಗಳೆ, ಮಹಾದೇವಿಯಕ್ಕಗಳ ರಗಳೆ, ರೇವಣಸಿದ್ಧೇಶ್ವರ ರಗಳೆ, ಶಂಕರದಾಸಿಮಯ್ಯನ ರಗಳೆ, ದಕ್ಷಾಧ್ವರ ರಗಳೆ, ಪಿಂಡೋತ್ಪತ್ತಿಯ ರಗಳೆ, ಪ್ರಭುವಿನ ರಗಳೆ, ತೆಲುಗು ಜೊಮ್ಮಣ್ಣನ ರಗಳೆ, ಹೇರೂರ ಹೆಂಗೂಸಿನ ರಗಳೆ, ಕೋಳೂರ ಕೊಡಗೂಸಿನ ರಗಳೆ, ಕೆಂಭಾವಿಯ ಭೋಗಣ್ಣನ ರಗಳೆ ಇತ್ಯಾದಿ.

ಹರಿಹರಕೃತವೆಂಬುದಕ್ಕೆ ಈ ಹೋಲಿಕೆ ಸಾಧನವಾಗಿದೆ. ಕೆಲವರು ಶಿವಶರಣರ ಚರಿತ್ರೆಯನ್ನು ಹರಿಹರನು ರಗಳೆಯಲ್ಲಿ ಬರೆದನೆಂಬುದುಕ್ಕೆ ಬಾಹ್ಯಪ್ರಮಾಣ ಗಳು[1] ದೊರೆತರೂ ಮೇಲೆ ಹೇಳಿದ ಸಂಕಲನಗಳಲ್ಲಿರುವ ರಗಳೆಗಳೇ ಹರಿಹರಕೃತ ವಾದ ಆ ಚರಿತ್ರೆಗಳೆಂದು ನಿರ್ಧರಿಸುವುದಕ್ಕೆ ಈ ಸಾಧನವು ಆವಶ್ಯಕವಾದದ್ದರಿಂದ ಇದನ್ನು ಇಲ್ಲಿ ವಿಶದಗೊಳಿಸಿದೆ.

ಅರುವತ್ತುಮೂವರ ರಗಳೆಗಳು ಹರಿಹರನವಷ್ಟೆ. ರಚನಾಕ್ರಮದಲ್ಲಿ ಅವುಗಳೆಲ್ಲಕ್ಕೂ ಸಾಮಾನ್ಯವಾದ ಕೆಲವು ವೈಲಕ್ಷಣ್ಯಗಳಿವೆ. ಅವು ಯಾವುವೆಂದರೆ :—

೧. ರಗಳೆಯು ಆರಂಭಕ್ಕೆ ಮೊದಲೂ ಅದು ಮುಗಿದಮೇಲೆಯೂ ಒಂದು ಕಂದ ಅಥವಾ ವೃತ್ತವಿರುತ್ತದೆ. ಅವುಗಳಲ್ಲಿ ಕಥಾನಾಯಕನ ಹೆಸರೂ ಪಂಪಾ ವಿರೂಪಾಕ್ಷನ ಅಂಕಿತವೂ ಇರುತ್ತವೆ.

೨. ಪ್ರತಿಯೊಂದು ರಗಳೆಯ ಕೊನೆಯ ಪಾದಗಳಲ್ಲಿಯೂ ಪಂಪಾವಿರೂ ಪಾಕ್ಷನ ಅಂಕಿತವಿರುತ್ತದೆ.

೩. ವಿಸ್ತಾರವಾದ ಕಥೆಯನ್ನೊಳಕೊಂಡ ರಗಳೆಗಳು ಕೆಲವು ಭಾಗಗಳಾಗಿ ವಿಭಾಗವಾಗಿರುತ್ತವೆ. ಆ ಭಾಗಗಳಿಗೆ ಸ್ಥಲಗಳೆಂದು ಹೆಸರು. ಆ ಸ್ಥಲಗಳಲ್ಲಿ ಮೊದಲನೆಯದು ರಗಳೆಯಲ್ಲಿಯೂ ಎರಡನೆಯದು ಗದ್ಯದಲ್ಲಿಯೂ ಹೀಗೆ ಸ್ಥಲ ಗಳು ಅನುಕ್ರಮವಾಗಿ ರಚಿತವಾಗಿರುತ್ತವೆ.

೪. ಅನೇಕ ಸ್ಥಲಗಳಿರುವ ರಗಳೆಗಳಲ್ಲಿ ಎರಡನೆಯ ಸ್ಥಲದಿಂದ ಪ್ರತಿ ಯೊಂದು ಸ್ಥಲದಲ್ಲಿಯೂ ಆ ಸ್ಥಲದ ಕಥೆಯ ಆರಂಭಕ್ಕೆ ಮೊದಲು ಒಂದು ಕಂದಪದ್ಯ ಅಥವಾ ವೃತ್ತವಿರುತ್ತದೆ (ಕೆಲವು ವೇಳೆ ಹೆಚ್ಚು ಪದ್ಯಗಳಿರುವುದೂ ಉಂಟು). ಅದರಲ್ಲಿ ಹಿಂದಿನ ಸ್ಥಲದಲ್ಲಿ ವರ್ಣಿತವಾದ ಕಥಾಭಾಗವು ಸಂಗ್ರಹ ವಾಗಿ ಸೂಚಿತವಾಗುತ್ತದೆ.

ಹರಿಹರನವೆಂದು ತೋರುವುದಾಗಿ ಮೇಲೆ ಹೇಳಿರುವ ಎಲ್ಲ ರಗಳೆಗಳಲ್ಲಿಯೂ ಈ ಲಕ್ಷಣಗಳು ಕಂಡುಬರುತ್ತವೆ. (ಬಸವರಾಜದೇವರ ರಗಳೆಯ ಸಮಗ್ರ ಗ್ರಂಥವು ದೊರೆಯದಿರುವುದರಿಂದ ಗ್ರಂಥಾಂತ್ಯದ ಭಾಗವು ಗೊತ್ತಾಗಿಲ್ಲ. ಮಿಕ್ಕ ಲಕ್ಷಣಗಳೆಲ್ಲವೂ ಅದರಲ್ಲಿ ಕಂಡುಬರುತ್ತವೆ.) ಹರಿಹರನು ಅರುವತ್ತು ಮೂವರ ರಗಳೆಗಳನ್ನಲ್ಲದೆ ಇನ್ನೂ ಅನೇಕ ರಗಳೆಗಳನ್ನು ಬರೆದನೆಂದು ತಿಳಿದು

---

[1] ಹೀಗೆ ಬಾಹ್ಯಪ್ರಮಾಣಗಳು ದೊರೆಯುವ ರಗಳೆಗಳ ಸಂಖ್ಯೆ ಅತ್ಯಲ್ಪ. ಮಿಕ್ಕ ಅನೇಕ ರಗಳೆಗಳು ಹರಿಹರಕೃತವೆಂದು ನಿರ್ಧರಿಸುವುದಕ್ಕೆ ಸಾಮಾನ್ಯವಾಗಿ ಈ ಸಾಧನವೊಂದೇ ಪ್ರಮಾಣವಾಗುತ್ತದೆ.

ಬರುವುದರಿಂದಲೂ[1] ಈ ರಗಳೆಗಳನ್ನು ಬೇರೊಬ್ಬ ಕವಿ ಬರೆದನೆಂಬುದಕ್ಕೆ ಆಧಾರವಾವುದೂ ಇಲ್ಲದಿರುವುದರಿಂದಲೂ ಇವು ಆತನವೆಂದು ಅಂಗೀಕರಿಸುವುದು ಸ್ವಾಭಾವಿಕವೂ ನ್ಯಾಯವೂ ಆಗಿದೆ.[2]

ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದಕ್ಕೆ ಮೇಲೆ ಹೇಳಿದಂತೆ ಅಂಕಿತರಚನಾಕ್ರಮಗಳ ಆಧಾರವಿದೆ. ಅಲ್ಲದೆ ಸಿದ್ಧನಂಜೇಶನ ಸ್ಪಷ್ಟೋಕ್ತಿಯ ಆಧಾರವೂ ದೊರೆಯುತ್ತದೆ. ಸಿದ್ಧನಂಜೇಶನ ರಾಘವಾಂಕ ಚರಿತ್ರದಲ್ಲಿ ಒಂದು ಕಡೆ ರಾಘವಾಂಕನು ಕುಮಾರವ್ಯಾಸನಿಗೆ ಹರಿಹರನ ಮಹತ್ವವನ್ನು ವರ್ಣಿಸುವ ಸಂದರ್ಭದಲ್ಲಿ (ಸಂ. ೧೪-ಪ. ೧೨೦),

ಮತ್ತೆ ಕೇಳೆಲೆ ಕುಮಾರವ್ಯಾಸ **ಬಸವನಿ**
**ಪ್ಪತ್ತೈದು ಸ್ಥಲದ ರಗಳೆಯು ಮಾಡಿ** ಸಲಿವೃತ್ತು
ದಾತ್ತಭಕ್ತಿಯೊಳು. ವಿರೂಪಾಕ್ಷನೆಡೆಗೊಯ್ಯಲಿಸಿದು ಮಿಗಿಲಾದುದೆಂದು |
ಹೊತ್ತಗೆಯ ತೆಗೆದುಕೊಂಡುಜು ಸಂಗಿದಂ ಚೆನ್ನೆ
ಯಿತ್ತ ಪಾಲ್ಗುಡಿದಂತೆ ಸರ್ವರುಂ ಪೊಗಳಿದರು
ಚಿತ್ತಜಮದಾರಣ್ಯದಾವ ಹರಿಹರದೇವ ಕವಿಚಕ್ರವರ್ತಿಯೆಂದು ||

ಎಂಬ ಪದ್ಯವು ದೊರೆಯುತ್ತದೆ. ಇದರಲ್ಲಿ ಪ್ರಶಸ್ತಪಡಿಸಿರುವ ಭಾಗದಿಂದ ಹರಿಹರನು ಬಸವಣ್ಣನವರ ಚರಿತ್ರೆಯನ್ನು ಇಪ್ಪತ್ತೈದು ಸ್ಥಲಗಳುಳ್ಳ ರಗಳೆಯ ಗ್ರಂಥವನ್ನಾಗಿ ರಚಿಸಿದನೆಂದು ಗೊತ್ತಾಗುತ್ತದೆ. ಈ ಗ್ರಂಥವೇ ಬಸವರಾಜದೇವರ ರಗಳೆಯಾಗಿರಬೇಕು. ನಮಗೆ ದೊರೆತಿರುವ ಸುಮಾರು ಹದಿಮೂರು ಸ್ಥಲಗಳಲ್ಲಿ ಕಥೆ ಅರ್ಧವಾಗಿರುವುದು ಇದನ್ನು ಸಮರ್ಥಿಸುತ್ತದೆ.

ಹೀಗೆ ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದಕ್ಕೆ ಸಿದ್ಧನಂಜೇಶನ ಸ್ಪಷ್ಟವಾದ ಹೇಳಿಕೆಯ ಆಧಾರವೂ ಇದ್ದರೂ ಈ ವಿಷಯದಲ್ಲಿ ಸಂಶಯವು ಉಳಿಯುವ ಸಂಭವವುಂಟು. ಏಕೆಂದರೆ ಬಸವಣ್ಣನವರ ಚರಿತ್ರೆಯನ್ನು ಕುರಿತು ಪುರಾಣಗಳನ್ನು ರಚಿಸಿದ ಕವಿಗಳು ಯಾರೇ ಆಗಲಿ ನಮಗೆ ತಿಳಿದಿರುವುದರಲ್ಲಿ ಹರಿಹರನು ಬಸವಣ್ಣನವರ ಚರಿತ್ರೆಯನ್ನು ಬರೆದಿರುವನೆಂಬ

[1] ಆತನು ಬರೆದ ಒಟ್ಟು ರಗಳೆಗಳ ಸಂಖ್ಯೆ ನೂರೊಂದು ಎಂದು ಕೆಲವರೂ ನೂರಿಪ್ಪತ್ತು ಎಂದು ಕೆಲವರೂ ಹೇಳುತ್ತಾರೆಂದು ಕರ್ಣಾಟಕ ಕವಿಚರಿತೆ (ಸಂ. ೧—ಪು. ೨೩೨) ಯಲ್ಲಿ ಹೇಳಿದೆ.

[2] ಕೆಲವು ರಗಳೆಗಳಲ್ಲಿ ಹರಿಹರನ ಹೆಸರೋ ಅಥವಾ ಆತನ ಗುರುಪರಂಪರೆಯೋ ಉಕ್ತವಾಗಿ ಅವು ಹರಿಹರನವೆಂಬುದು ಸ್ಥಿರಪಡುತ್ತದೆ. ಉದಾ.—ಮಹಿಮಾ ರಗಳೆ, ಭೃಂಗಿ ರಗಳೆ.

ಅಂಶವನ್ನು ತಿಳಿಸಿಲ್ಲ; ಅಲ್ಲದೆ ಆತನ ಗ್ರಂಥದಿಂದ ವಿಷಯವನ್ನು ಸಂಗ್ರಹಿಸಿ ದಂತೆಯೂ ತೋರುವುದಿಲ್ಲ. ಅವರಿಗೆ ಹರಿಹರನ ಮತ್ತು ಆತನ ಕಾವ್ಯಗಳ ಪರಿಚಯುವಿರಲಿಲ್ಲವೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ, ಭೀಮಕವಿ ತನ್ನ ಬಸವಪುರಾಣದಲ್ಲಿ ಹರಿಹರನನ್ನು ಸ್ಮರಿಸಿದ್ದಾನೆ. ವೃಷಭೇಂದ್ರವಿಜಯಕರ್ತ ನಾದ ಷಡಕ್ಷರಕವಿಯಂತು ಹರಿಹರನನ್ನೇ ಮೇಲ್ಪಂಕ್ತಿಯಾಗಿ ಇಟ್ಟು ಕೊಂಡು ಕಾವ್ಯರಚನೆಮಾಡಿದವನು. ಹರಿಹರನಾದರೆ ವೀರಶೈವಕವಿಗಳಲ್ಲಿ ಅತ್ಯಂತ ಪ್ರಖ್ಯಾತನಾದ ಪೂರ್ವಕವಿ; ಆದಿಕವಿಯೆಂದೂ ಹೇಳಬಹುದು. ಇಂಥ ಮಹಾಕವಿ ವೀರಶೈವಮತೋದ್ಧಾರಕರಲ್ಲಿ ಅಗ್ರಗಣ್ಯರೆಂದು ಪ್ರಖ್ಯಾತ ರಾದ ಬಸವಣ್ಣನವರ ಚರಿತ್ರೆಯನ್ನು ಬರೆದಿದ್ದ ಪಕ್ಷದಲ್ಲಿ ಈ ಪುರಾಣ ಲೇಖಕರು ಹೀಗೆ ಅದನ್ನು ಅಲಕ್ಷ್ಯಮಾಡುತ್ತಿದ್ದರೆ? ಶಿವಶರಣರ ಚರಿತ್ರೆ ಗಳನ್ನು ಈಚೆಗೆ ಬರೆದವರು ಆ ಶರಣರ ಚರಿತ್ರೆಯನ್ನು ಹರಿಹರನು ಬರೆದಿದ್ದ ಪಕ್ಷದಲ್ಲಿ ಅದನ್ನು ತಮ್ಮ ಗ್ರಂಥಗಳಲ್ಲಿ ಸೂಚಿಸುವ ಪದ್ಧತಿಯುಂಟು. ಉದಾ ಹರಣೆಗೆ, ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆದನೆಂದು ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರ ಪುರಾಣ (ಸಂ. ೧—ಪ. ೨೧) ದಲ್ಲಿಯೂ ಮಹಾದೇವಿಯಕ್ಕನ ರಗಳೆಯನ್ನು ಬರೆದಿರುವನೆಂದು ಚೆನ್ನಬಸವಾಂಕನು ಮಹಾ ದೇವಿಯಕ್ಕನ ಪುರಾಣ (ಆ. ೧—ಪ. ೧೯) ದಲ್ಲಿಯೂ ಹೇಳಿದ್ದಾರೆ. ಹರಿಹರನು ಬಸವಣ್ಣನವರ ಚರಿತ್ರೆಯನ್ನು ಬರೆದ ವಿಷಯವು ಸಿದ್ಧನಂಜೇಶನಿಗೆ ಪ್ರಾಸಂಗಿಕ ವಾದದ್ದು. ಆತನು ಅಷ್ಟು ಶ್ರೇಷ್ಠವಾದದ್ದೆಂದು ಹೇಳಿರುವ ಗ್ರಂಥದ ಸುದ್ದಿಯನ್ನು ಬಸವಪುರಾಣ ಲೇಖಕನಾದ ಒಬ್ಬ ಕವಿಯಾದರೂ ಎತ್ತದಿರುವುದು ಈ ವಿಷಯ ದಲ್ಲಿ ಸಂಶಯವನ್ನುಂಟುಮಾಡುತ್ತದೆ. ಹೀಗೆ ಸಂಶಯಕ್ಕೆ ಆಸ್ಪದವಿರುವುದರಿಂದ ನಮಗೆ ದೊರೆತಿರುವ ಇನ್ನು ಕೆಲವು ಸಾಧನಗಳನ್ನು ಇಲ್ಲಿ ನಿರೂಪಿಸುತ್ತೇವೆ:—

೧. ಹರೀಶ್ವರನವೆಂದು ಗೊತ್ತಾಗುವ ರಗಳೆಗಳಲ್ಲಿ ಕಂಡುಬರುವ ಭಾವ ಗಳೂ ಮಾತಿನ ಧೋರಣೆಯೂ ಕೆಲವು ವೇಳೆ ಅವೇ ಮಾತುಗಳೂ ಬಸವರಾಜ ದೇವರ ರಗಳೆಯಲ್ಲಿ ಕಂಡುಬರುತ್ತವೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಇಹಪ್ಪಗೆಯಾಂಡರ ರಗಳೆ[1]ಯಲ್ಲಿ ಶಿವನು ಆತನನ್ನು ಪರೀಕ್ಷಿ ಸುವುದಕ್ಕಾಗಿ ಸುಖಿಜಂಗಮನ ವೇಷದಲ್ಲಿ ಬಂದಾಗ ಆತನು ತನ್ನ ಹೆಂಡತಿ ಯಾದ ಪತಿಹಿತವೆಯನ್ನು ಆ ಜಂಗಮನಲ್ಲಿಗೆ ಕಳುಹಿಸಲು ಶಿವನು ಮೆಚ್ಚಿ ಆಕೆಗೆ ಸ್ವಸ್ವರೂಪವನ್ನು ತೋರಿಸಿದನು. ಅದನ್ನು “ಪತಿಹಿತವೆ ಕಂಡಿಹಪ್ಪಗೆಯಾಂಡ

[1] ಈತನು ಅರುವತ್ತುಮೂವರು ಪುರಾತನರಲ್ಲಿ ಒಬ್ಬನು.

ಬಾ ಬಾರ| ಅತಿಕರಂ ಲೇಸಾಯ್ತು ಬಾರೆಲೆಲೆ ಬಾ ಬಾರ|" ಎಂದು ಸಂಭ್ರಮ ದಿಂದ ಕೂಗಿ "ನೋಡ ದೇವರಿವರಿವರೆ"ನ್ನಲು ಆತನು ನಿಶ್ಚಿಂತನಾಗಿ "ಮರುಳೆ ಮುನ್ನಾರೆಂದು ಕೊಟ್ಟೆನೆಂ"ದು ಉತ್ತರಕೊಡುತ್ತಾನೆ. ಬಸವ ರಾಜದೇವರ ರಗಳೆಯಲ್ಲಿಯೂ (ಸ್ಥಲ ೧೨) ಶಿವನು ಬಸವಣ್ಣನವರ ಭಕ್ತಿ ಯನ್ನು ಪರೀಕ್ಷಿಸುವುದಕ್ಕಾಗಿ ಸುಖಿಜಂಗಮವೇಷದಿಂದ ಬರುತ್ತಾನೆ. ಬಸವ ಣ್ಣನವರು ತಮ್ಮ ಪ್ರಿಯಪತ್ನಿಯಾದ ಮಾಯಿದೇವಿಯನ್ನು ಜಂಗಮನಿಗೆ ಒಪ್ಪಿಸುತ್ತಾರೆ. ಅದಕ್ಕೆ ಮೆಚ್ಚಿ ಶಿವನು ಮಾಯಿದೇವಿಗೆ ಸ್ವಸ್ವರೂಪ ತೋರಲು ಆಕೆ "ನೋಡಲಮ್ಮದೆ ನಡನಡಂ ನಡುಗಿ, ಬಸವ ಬಸವಾ, ಜಂಗಮದೇವರು ಸಂಗಮದೇವರಾದರೆನೆ," ಬಸವಣ್ಣನವರು "ತಾಯೆ ತಾಯೆ, ಮುನ್ನವಾ ರೆಂದು ಕೊಟ್ಟೆನೆಂ"ದು ಉತ್ತರಕೊಡುತ್ತಾರೆ. ಭೋಗಣ್ಣನ ರಗಳೆ[1]ಯಲ್ಲಿ ಕೆಂಭಾವಿಯ ಬ್ರಾಹ್ಮಣರು ಆ ಊರಿನ ಅರಸಾದ ಚಂದಿಮರಸನಲ್ಲಿಗೆ ಹೋಗಿ ಭೋಗಣ್ಣನು ಶಿವಶರಣನೆಂದು ಒಬ್ಬ ಹೊಲೆಯನನ್ನು ಮನೆಯಲ್ಲಿ ಸೇರಿಸಿಕೊಂಡಿ ರುವನೆಂಬುದಾಗಿ ದೂರಲು ಚಂದಿಮರಸನು ಕರೆಸಿ ಕೇಳಿದಾಗ ಭೋಗಣ್ಣನು,

....ಹೊಲೆಯರಂ ಹೊಗಿಸಿತಿಲ್ಲ ಮನೆಯೊಳಗರಸ
ನಿನಗೆ ತಿಳಿವಿಲ್ಲ ತಿಳಿವಿಲ್ಲದಡೆ ಕೇಳರಸ|
ನಾರಣಕ್ರಮಿತರಂ ಹೊಗಿಸಿದೆನೆ ಮನೆಯೊಳಗೆ
ಸೂರಿಭಟ್ಟರನೊಯ್ದು ಪೊಗಿಸಿದೆನೆ ಮನೆಯೊಳಗೆ|
ಕೃಷ್ಣಪೆದ್ದಿಗಳನೊಮ್ಮೆಯು ಕರೆದು ಬಲ್ಲೆನೇ
ವಿಷ್ಣುಭಟ್ಟರನೊಮ್ಮೆಯುಂ ನೋಂಕಿ ಬಲ್ಲೆನೇ|
ಶಿವನನಱಿಯದ ಹೊಲೆಯರಂ ಹೊಗಿಸೆ ಕೇಳರಸ
ಶಿವಭಕ್ತನಂ ಹೊಗಿಸಿದೆಂ ತಪ್ಪೆ ಹೇಳರಸ|

ಎಂದು ಉತ್ತರಕೊಡುತ್ತಾನೆ. ಬಸವರಾಜದೇವರ ರಗಳೆಯಲ್ಲಿ ಇಂಥ ಒಂದು ಸನ್ನಿವೇಶವಿದೆ. ಮಂಗಳವಾಡದ ಬ್ರಾಹ್ಮಣರು ಬಿಜ್ಜಳನಲ್ಲಿಗೆ ಹೋಗಿ, ಬಸ

[1] ಈ ಭೋಗಣ್ಣನ ರಗಳೆಯನ್ನು ಹರಿಹರನು ಬರೆದನೆಂಬುದಕ್ಕೆ ಅದರ ಅಂಕಿತ ರಚನಾ ಕ್ರಮಗಳ ಆಧಾರವಲ್ಲದೆ ಪಂಪಾ ಶತಕದಲ್ಲಿಯೂ ಆಧಾರವು ದೊರೆಯುತ್ತದೆ. ಆ ಶತಕದಲ್ಲಿ ಶಿವಶರಣರ ಮಹಿಮೆಯನ್ನು ಕೊಂಡಾಡುವಾಗ ಪುರಾತನರಲ್ಲಿ ಕೆಲವರ ಹೆಸರಿನ ಜತೆಗೆ ಜೊಮ್ಮಯ್ಯ, ಭೋಗಣ್ಣ, ದಾಸಿಮಯ್ಯ, ಕೊಡಗೂಸು ಇವರ ಹೆಸರುಗಳು ಉಕ್ತವಾಗಿವೆ (ಪ. ೫೯, ೬೬, ೬೭). ಅಲ್ಲಿ ಸೂಚಿತವಾಗಿರುವ ಅವರ ಮಹಿಮೆಯನ್ನು ನೋಡಿದರೆ ಅವರು

ವಣ್ಣನು ನಾಗಿದೇವನೆಂಬ "ಪೊಲೆಯನೆಂದಡೆ ಕೋಪಂ—ಹಿರಿಯ ಭಕ್ತನ" ಮನೆಯಲ್ಲಿ ಊಟಮಾಡಿದನೆಂದು ದೂರುತ್ತಾರೆ. ಆಗ ಬಿಜ್ಜಳನು ಕರೆಸಿ ಕೇಳಲು ಬಸವಣ್ಣನವರು ಕೊಟ್ಟ ಈ ಉತ್ತರವನ್ನು ಭೋಗಣ್ಣನು ಚಂದಿಮರಸನಿಗೆ ಕೊಟ್ಟ ಉತ್ತರದೊಡನೆ ಹೋಲಿಸಬಹುದು :—

"ಎಲೆ ಬುದ್ಧಿಯಿಲ್ಲದ ಭೂಪ, ಎರಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ? ಮುಕುಂದಭಟ್ಟರ ಮನೆಯೊಳುಂಡೆನೆ? ಸೌರಿಪೆದ್ದಿಗಳ ಸಾರಿ ನಿಂದೆನೆ? ದಾಮೋದರಭಟ್ಟರಂ ಪ್ರೇಮದಿಂ ಸೋಂಕಿದೆನೆ? ಕೇಶವಘೈಸರ ವಾಸನೆಯುಂಟೆ? ಹರನನಱಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ" (೧೦ : ೪೨-೪೭).

೨. ಕೈಲಾಸದ ಪ್ರಮಥಗಣಗಳು ಭೂಲೋಕದಲ್ಲಿ ಶಿವಶರಣರಾಗಿ ಹುಟ್ಟಲು ಕಾರಣವು ಅವರು ಕೈಲಾಸದಲ್ಲಿ ಮಾಡಿದ ಯಾವುದೋ ಒಂದು ತಪ್ಪು ಎಂಬುದು ಹರಿಹರನ ಒಂದು ಅಪೂರ್ವವಾದ ಭಾವನೆಯೆಂದು ಕಂಡುಬರುತ್ತದೆ. ಈ ವಿಧವಾದ ಭಾವನೆಯು ನಂಬಿಯಣ್ಣ[1], ರೇವಣಸಿದ್ಧ, ಮಹಾದೇವಿಯಕ್ಕ ಇವರ ರಗಳೆಗಳಲ್ಲಿ ಕಂಡುಬರುತ್ತದೆ. ಒಂದು ದಿನ ಪುಷ್ಪದಂತನೆಂಬ ಪ್ರಮಥನು ಪಾರ್ವತಿಗಾಗಿ ಹೂವುಕೊಯ್ಯುತ್ತಿದ್ದ ಇಬ್ಬರು ವಿಲಾಸಿನಿಯರನ್ನು ನೋಡಿ ಮೋಹಗೊಳ್ಳಲು, ನಂಬಿಯಣ್ಣನೆಂಬ ಹೆಸರಿನಿಂದ ಭೂಮಿಯಲ್ಲಿ ಹುಟ್ಟೆಂದು ಶಿವನು ಅವನಿಗೆ ಆಜ್ಞೆಮಾಡುತ್ತಾನೆ. ರೇಣುಕನೆಂಬ ಪ್ರಮಥನು ಒಂದು ದಿನ ಶಿವನ ಪ್ರಸಾದವನ್ನು ಸ್ವೀಕರಿಸುವುದಕ್ಕೆ ಹೋಗುತ್ತಾ ದಾರಿಯಲ್ಲಿ ದಾರುಕನೆಂಬ ಪ್ರಮಥನನ್ನು ದಾಟಿಕೊಂಡು ಹೋಗಲು ಆ ತಪ್ಪಿತಕ್ಕಾಗಿ ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟುವಂತೆ ಶಿವನು ಅವನಿಗೆ ಆಜ್ಞಾಪಿಸಿದನು. ಮಹಾದೇವಿ ಎಂಬ ರುದ್ರಕನ್ನಿಕೆಗೆ ಒಬ್ಬ ಗುಪ್ತಗಣೇಶ್ವರನ ಕಾಲು ಸೋಕಲು ಆಕೆ ಅವನನ್ನು ಹೀನಭವಿ ಎಂದು ಬೈದಳು. ಅದನ್ನು ನೋಡಿ ಪಾರ್ವತಿ ಅವಳನ್ನು ಕುರಿತು, ನೀನು ಮರ್ತ್ಯಲೋಕದಲ್ಲಿ ಭಕ್ತರ ಹೊಟ್ಟೆಯಲ್ಲಿ ಹುಟ್ಟಿ ಭವಿಗೆ ಹೆಂಡತಿಯಾಗಿ ಶಿವಭಕ್ತರ ಸೇವೆಮಾಡಿ ಮರಳಿ ಕೈಲಾಸಕ್ಕೆ ಬಾ

---

ತೆಲುಗು ಜೊಮ್ಮಯ್ಯ, ಕೆಂಭಾವಿಯ ಭೋಗಣ್ಣ, ಜೇಡರ ದಾಸಿಮಯ್ಯ, ಕೋಳೂರ ಕೊಡಗೂಸು ಎಂದು ಗೊತ್ತಾಗುತ್ತದೆ. ಪುರಾತನರ ರಗಳೆಗಳನ್ನು ಬರೆದಂತೆಯೇ ಈ ಶಿವಶರಣರ ರಗಳೆಗಳನ್ನೂ ಹರಿಹರನು ಬರೆದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಮೇಲೆ ಹೇಳಿದ ರಗಳೆಗಳ ಸಂಕಲನಗಳಲ್ಲಿ ಈ ಎಲ್ಲ ರಗಳೆಗಳೂ ಸಿಕ್ಕುತ್ತವೆ.

[1] ನಂಬಿಯಣ್ಣನು ಅರುವತ್ತುಮೂವರು ಪುರಾತನರಲ್ಲಿ ಒಬ್ಬನು.

ಎಂದು ಆಜ್ಞೆಮಾಡುತ್ತಾಳೆ. ಬಸವಣ್ಣನವರು ಮನುಷ್ಯರಾಗಿ ಹುಟ್ಟು ವುದಕ್ಕೂ ಅಂಥದೇ ಒಂದು ಕಾರಣವು ಬಸವರಾಜದೇವರ ರಗಳೆಯಲ್ಲಿ ಉಕ್ತವಾಗಿದೆ. ಶಿವನ ಆಸ್ಥಾನದಲ್ಲಿ ವೃಷಭಮುಖನೆಂಬ ಗಣಪನು ಪ್ರಸಾದವನ್ನು ಹಂಚುವಾಗ ಷಣ್ಮುಖನಿಗೆ ಕೊಡುವುದನ್ನು ಮರೆತು, ಕೊಟ್ಟೆನೆಂದು ಸುಳ್ಳು ಸಾಧಿಸಿದ್ದರಿಂದ ಶಿವನು ಆತನನ್ನು ಕುರಿತು, ಭೂಮಿಯಲ್ಲಿ ಬಸವನೆಂಬ ಹೆಸರಿನಿಂದ ಹುಟ್ಟಿ "ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು| ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು| ಗಣಸಮಕ್ಷದ ಪುಸಿಗೆ ಶರಣರ್ಗೆ ಮಾಡುತ್ತೆ| ಅಣೆಯುರದೊಳೆನ್ನ ಭಕ್ತಿಯನಿಳೆಗೆ ಕೂಡುತ್ತೆ| ಎನ್ನ ಪ್ರಸಾದ ಸಾಮರ್ಥ್ಯಮಂ ತೋಱುತಂ| ಮನ್ನಣೆಯೊಳಿಲ್ಲಿಗೈತರ್ಪುದಿದು ನಿರ್ವಿತಂ" (೧ : ೭೯-೮೮) ಎಂದು ಹೇಳುತ್ತಾನೆ. ಬಸವಣ್ಣನವರ ಜನನದ ವಿಚಾರದಲ್ಲಿ ಈ ತೆರನಾದ ಕಲ್ಪನೆ ನಮಗೆ ತಿಳಿದಿರುವಮಟ್ಟಿಗೆ ಮತ್ತಾವ ವೀರಶೈವಗ್ರಂಥದಲ್ಲಿಯೂ ಕಂಡುಬರುವುದಿಲ್ಲವಾದದ್ದರಿಂದಲೂ ಹರಿಹರನ ಇತರ ರಗಳೆಗಳಲ್ಲಿ ಇದೇ ತೆರದ ಕಲ್ಪನೆ ಕಂಡುಬರುವುದರಿಂದಲೂ ಈ ರಗಳೆ ಹರಿಹರಕೃತವಾಗಿರಬೇಕೆಂಬುದಕ್ಕೆ ಇದೂ ಒಂದು ಸಾಧನವಾಗಿರುತ್ತದೆ.

೩. ಬಸವರಾಜದೇವರ ರಗಳೆ ಹರಿಹರನದೆಂಬುದನ್ನು ಪೋಷಿಸುವ ಸಣ್ಣ ಅಂಶಗಳೂ ಉಂಟು. ಉದಾಹರಣೆಗಾಗಿ ಇಲ್ಲಿ ಕೆಲವನ್ನು ಕೊಟ್ಟಿದೆ. ಶಾಸನಗಳಲ್ಲಿಯೂ ಬಸವಪುರಾಣಾದಿ ವೀರಶೈವಗ್ರಂಥಗಳಲ್ಲಿಯೂ ಬಿಜ್ಜಳನ ರಾಜಧಾನಿ ಕಲ್ಯಾಣವೆಂದು ಉಕ್ತವಾಗಿದೆ. ಆದಕಾರಣ ಇದು ಸುಪ್ರಸಿದ್ಧವಾದ ವಿಷಯ. ಬಸವರಾಜದೇವರ ರಗಳೆಯಲ್ಲಾದರೋ ಬಿಜ್ಜಳನ ರಾಜಧಾನಿ ಮಂಗಳವಾಡವೆಂದು ಹೇಳಿದೆ. ಹೆಸರಿನ ಹೋಲಿಕೆಯಿಂದ ಈ ಎರಡು ಪಟ್ಟಣಗಳೂ ಒಂದೇ ಎಂದು ತೋರಬಹುದು.[1] ಆದರೆ ರೇವಣಸಿದ್ಧರ ರಗಳೆ[2]ಯಲ್ಲಿ ಅವರು ಕಲ್ಯಾಣಕ್ಕೆ

---

[1] ಈ ವಿಧವಾದ ಅಭಿಪ್ರಾಯಕ್ಕೆ ಸಿಂಗಿರಾಜಪುರಾಣದ ಒಂದು ಪದ್ಯವು ಸಾಧನವಾಗಬಹುದೆಂದು ತೋರುತ್ತದೆ. ಆ ಪದ್ಯವು ಯಾವುದೆಂದರೆ :—

ಮಂಗಳಂ ಮೊಳೆತು ಮಂಗಳ ಬೆಳೆದುದಖಿಳ ಶುಭ
ಮಂಗಳ ಕವಲ್ತು ಮಂಗಳ ತಳಿತು ಮಂಗಳಂ
ಕಂಗೊಳಿಸಿ ಹೂತುಕಾತುಂ ದೋರೆವಣ್ಣ ಮಂಗಳಮಹಾಸಿರಿಯ ಸವಿಯ|
ಮಂಗಳ ಜನಂಗಳೆಲ್ಲಾಸ್ವಾದಿಸಾನಂದ
ಮಂಗಳ ರಸಾವೇಶರಾಗಿ ಮಂಗಳಹಾಡಿ
ಮಂಗಳಂ ಹೂಡಿ ಮಂಗಳವಾಡಿಯೆನಿಪ ಕಲ್ಯಾಣನಾಮವಾಯ್ತು ||

[2] ಇದು ಹರಿಹರ ಕೃತವೆಂಬುದನ್ನು ಹಿಂದೆಯೇ ಸೂಚಿಸಿದ್ದೇವೆ.

ಹೋಗಿ ಅಲ್ಲಿಂದ ಬಿಜ್ಜಳನ ರಾಜಧಾನಿಯಾದ ಮಂಗಳವಾಡಕ್ಕೆ ಬಂದರೆಂದು ಹೇಳಿರುವುದರಿಂದ ಇವೆರಡೂ ಬೇರೆ ಬೇರೆ ಸ್ಥಳಗಳೆಂದು ಹರಿಹರನ ಅಭಿಪ್ರಾಯವೆಂಬುದು ಸ್ಪಷ್ಟವಾಗುತ್ತದೆ. ಅಪ್ರಸಿದ್ಧವಾದ ಮಂಗಳವಾಡವು ಬಿಜ್ಜಳನ ರಾಜಧಾನಿಯೆಂಬ ಅಭಿಪ್ರಾಯವು ರೇವಣಸಿದ್ಧಪುರಾಣ, ಬಸವರಾಜದೇವರ ರಗಳೆ ಇವೆರಡರಲ್ಲಿಯೂ ಇರುವುದರಿಂದ ಇವೆರಡನ್ನೂ ಒಬ್ಬ ಕವಿಯೇ ಬರೆದಿರಬೇಕೆಂಬುದಕ್ಕೆ ಅವಕಾಶವಾಗುತ್ತದೆ. ಗಿರಿಜಾಕಲ್ಯಾಣದಲ್ಲಿ ಪಾರ್ವತಿಯನ್ನೂ ಮಹಾದೇವಿಯಕ್ಕನ ರಗಳೆಯಲ್ಲಿ ಆಕೆಯನ್ನೂ "ಹೊಂಗಡಗದ ಲಿಂಗವಂತೆ" ಎಂದು ವಿಶೇಷಿಸಿದೆ. ಬಸವರಾಜದೇವರ ರಗಳೆಯಲ್ಲಿಯೂ ಬಸವಣ್ಣನ ಮಗನ ಬಾಲ್ಯವರ್ಣನೆಯಲ್ಲಿ ಆತನನ್ನು "ಹೊಂಗಡಗದ ಲಿಂಗವಂತಂ" ಎಂದು ವಿಶೇಷಿಸಿದೆ. ಗಿರಿಜಾಕಲ್ಯಾಣದಲ್ಲಿ ಪಾರ್ವತಿ ಹುಟ್ಟಿದ ಮೇಲೆ ಲಿಂಗವನ್ನು ತೋರಿಸಲು ಕಣ್ದೆರೆದಳೆಂದು ಹೇಳಿದೆ; ಬಸವಣ್ಣನು "ಲಿಂಗಮಂ ತೋಱೆ ಕಣ್ದೆಱೆದು ಸುಖಿ"ಯಾದನೆಂದು ಬಸವರಾಜದೇವರ ರಗಳೆಯಲ್ಲಿ ಹೇಳಿದೆ.

ಬಸವರಾಜದೇವರ ರಗಳೆಯನ್ನು ಹರಿಹರನು ಬರೆದನೆಂಬುದಕ್ಕೆ ಮೇಲೆ ಹೇಳಿರುವಂತೆ ವಿಶ್ವಾಸಾರ್ಹವಾದ ಅನೇಕ ಸಾಧನಗಳಿವೆ. ಅಲ್ಲದೆ ಈ ರಗಳೆಯಲ್ಲಿ ಕಂಡುಬರುವ ಕವಿತಾಸಾಮರ್ಥ್ಯವು ಹರಿಹರನ ಕವಿತಾಸಾಮರ್ಥ್ಯಕ್ಕೆ ಸಮಾನವಾಗಿದೆ. ಹರಿಹರನವೆಂದು ಗೊತ್ತಾಗಿರುವ ರಗಳೆಗಳನ್ನು ಓದಿ ಈ ರಗಳೆಯನ್ನೂ ಓದಿದರೆ ಎರಡರಲ್ಲಿಯೂ ಒಬ್ಬ ಕವಿಯ ಕೈವಾಡವೇ ಕಂಡುಬರುತ್ತದೆ. ಈ ರಗಳೆಯನ್ನು ಬೇರೊಬ್ಬ ಕವಿ ಬರೆದನೆಂಬುದಕ್ಕೆ ಸಾಧನವಾವುದೂ ಇಲ್ಲ; ಇಷ್ಟು ಕವಿತಾಸಾಮರ್ಥ್ಯವುಳ್ಳ ಕವಿ ಮತ್ತೊಬ್ಬನಿದ್ದರೆ ಅವನೂ ಹರಿಹರನಂತೆ ಪ್ರಖ್ಯಾತಿಗೆ ಬರಬೇಕಾಗಿತ್ತು. ಅಂಥ ಕವಿ ಯಾರೂ ಇದ್ದಂತೆ ತಿಳಿದುಬಂದಿಲ್ಲವಾದ ಕಾರಣ ಈ ರಗಳೆ ಹರಿಹರನದೇ ಎಂದು ಸಿದ್ಧಾಂತಮಾಡಿದರೆ ದೋಷವಾಗಲಾರದು.

## ೩. ವಿಮರ್ಶೆ

ಈ ಬಸವರಾಜದೇವರ ರಗಳೆಯು ಅರ್ಧಭಾಗವು ರಗಳೆಯಲ್ಲಿಯೂ ಅರ್ಧಭಾಗವು ಗದ್ಯದಲ್ಲಿಯೂ ರಚಿತವಾಗಿದೆ. ಶಿವಶರಣರ ಚರಿತ್ರೆಗಳನ್ನು ಹರಿಹರನು ಹೆಚ್ಚಾಗಿ ಬರೆದಿರುವುದು ಬರಿಯ ರಗಳೆಯಲ್ಲಿ. ಬಲುದೊಡ್ಡವೆಂದು ತೋರಿದ ಕೆಲವು ಚರಿತ್ರೆಗಳಲ್ಲಿ ಮಾತ್ರ ಗದ್ಯವನ್ನು ವೈವಿಧ್ಯಕ್ಕಾಗಿ ಉಪಯೋಗಿಸಿಕೊಂಡಿರುವನು. ಹೀಗೆ ರಗಳೆಯಲ್ಲಿ ಕಾವ್ಯರಚನೆಮಾಡಿದ್ದರಿಂದ ಜನರು ಆತ

ನನ್ನು "ರಗಳೆಯ ಕವಿ" ಎಂದು ಹಾಸ್ಯಮಾಡಿದರೆಂದೂ ಆದಕಾರಣ ಆತನು ಗಿರಿಜಾಕಲ್ಯಾಣವನ್ನು ಚಂಪೂರೂಪವಾಗಿ ರಚಿಸಿದನೆಂದೂ ಒಂದು ಐತಿಹ್ಯವಿದೆ. ಈ ಹೇಳಿಕೆಯ ಪ್ರಕಾರ, ಒಬ್ಬ ಕವಿ ರಗಳೆಯಲ್ಲಿ ಎಷ್ಟೇ ಚೆನ್ನಾಗಿ ಗ್ರಂಥ ರಚನೆಮಾಡಲಿ, ಅದೇನೂ ಗಣ್ಯವಾಗತಕ್ಕದ್ದಲ್ಲ; ಕವಿಗೆ ಗೌರವ ಬರಬೇಕಾದರೆ ಆತನು ಚಂಪೂಕಾವ್ಯವನ್ನು ರಚಿಸಬೇಕು ಎಂಬ ಭಾವವಿರುವಂತೆ ತೋರುತ್ತದೆ. ರಗಳೆಗಳನ್ನು ಬರೆದಮೇಲೆ ಗಿರಿಜಾಕಲ್ಯಾಣವನ್ನು ಹರಿಹರನು ಬರೆದನೆಂಬ ಅಭಿಪ್ರಾಯವೂ ಜನರ ಹಾಸ್ಯಕ್ಕೆ ಭಯಪಟ್ಟು ಅವರನ್ನು ಮೆಚ್ಚಿಸುವುದಕ್ಕಾಗಿ ಚಂಪೂಕಾವ್ಯವನ್ನು ರಚಿಸಿದನೆಂಬ ಐತಿಹ್ಯವೂ ಸಂಶಯಾಸ್ಪದವಾದುವು. ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾದದ್ದೇನೂ ಇರಲಿಲ್ಲ. ಒಂದುವೇಳೆ ಆತನು ಗಿರಿಜಾಕಲ್ಯಾಣವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ ಗೌರವಾರ್ಹವೂ ಆಗಿವೆ. ಬಸವರಾಜದೇವರ ರಗಳೆಯನ್ನು ಓದುವವರು ಇದನ್ನು ಮನಗಾಣಬಹುದು.

ಹರಿಹರನ ಕಾಲಕ್ಕೆ ಹಿಂದೆಯೇ ರಗಳೆಯ ಛಂದಸ್ಸು ಕನ್ನಡಸಾಹಿತ್ಯದಲ್ಲಿ ಪ್ರಚಾರದಲ್ಲಿತ್ತು. ಕವಿಗಳು ಚಂಪೂಕಾವ್ಯಗಳಲ್ಲಿ ಅದನ್ನು ವೈವಿಧ್ಯಕ್ಕಾಗಿ ಅಲ್ಲಲ್ಲಿ ಅಪೂರ್ವವಾಗಿ ಉಪಯೋಗಿಸುತ್ತಿದ್ದರು. ಆದರೆ ಯಾರೂ ರಗಳೆಯಲ್ಲಿಯೇ ಒಂದು ಸಮಗ್ರಗ್ರಂಥವನ್ನು ರಚಿಸಿದಂತೆ ತಿಳಿದುಬಂದಿಲ್ಲ. ಹರಿಹರನು ಶಿವಶರಣರ ಚರಿತ್ರೆಗಳನ್ನು ಬರೆಯಬೇಕಾಗಿತ್ತು. ಈ ಕಥಾಕಾವ್ಯಗಳನ್ನು ರಚಿಸುವುದಕ್ಕೆ ಆಗ ಕನ್ನಡಕವಿಗಳು ರೂಢಿಗೆ ತಂದಿದ್ದ ಕಂದವೃತ್ತಗಳು ಹೊಂದಿಕೆಯಾಗುವುದಿಲ್ಲವೆಂದು ಹರಿಹರನಿಗೆ ತೋರಿರಬೇಕು. ಕಥಾಕಾವ್ಯವಾದರೋ ನದಿಯ ಪ್ರವಾಹದಂತೆ ನಿರರ್ಗಳವಾಗಿ ಸಾಗಬೇಕಾದದ್ದು; ಕಂದವೃತ್ತಗಳು ಪರಿಮಿತವಾದ ಅಳತೆಯುಳ್ಳವು; ತುಂಡುತುಂಡಾದುವು. ಕವಿ ಹೇಳಬೇಕೆಂದಿರುವ ಅಭಿಪ್ರಾಯಕ್ಕೆ ಇವು ಸುಸೂತ್ರವಾಗಿ ಹೊಂದಿಕೊಳ್ಳದ ಕಾರಣ ಕವಿಯೇ ಅವುಗಳ ಅಳತೆಗೆ ತಕ್ಕಂತೆ ತನ್ನ ಅಭಿಪ್ರಾಯಗಳನ್ನು ಜೋಡಿಸಿಕೊಳ್ಳಬೇಕಾಗುತ್ತದೆ.[1]

[1] ಇದನ್ನು ಚಂಪೂಲೇಖಕರ ಕಾವ್ಯಗಳಲ್ಲಿ ನೋಡಬಹುದು. ಅನೇಕ ವೇಳೆಗಳಲ್ಲಿ ಒಂದು ಭಾವ, ಅಭಿಪ್ರಾಯ ಅಥವಾ ವಾಕ್ಯವು ಒಂದು ಪದ್ಯದಲ್ಲಿ ಮುಗಿಯುವುದಿಲ್ಲ. ಅದನ್ನು ಮುಗಿಸುವುದಕ್ಕೆ ಗದ್ಯವನ್ನೋ ಬೇರೊಂದು ಪದ್ಯವನ್ನೋ ಬರೆಯಬೇಕಾಗುತ್ತದೆ. ಕೆಲವು ವೇಳೆ ಎರಡು ಮೂರನ್ನು ಸೇರಿಸಬೇಕಾಗಿಯೂ ಬರುತ್ತದೆ.

ಹರಿಹರನು ಬರೆಯಬೇಕೆಂದಿದ್ದ ಶಿವಶರಣರ ಚರಿತ್ರೆಗಳು ಅನೇಕವಾಗಿದ್ದುವು. ತಡೆಯಿಲ್ಲದೆ, ಸುಸೂತ್ರವಾಗಿ, ಬೇಗ ಬೇಗ ಕಥೆಯನ್ನು ಹೇಳಿಕೊಂಡು ಹೋಗ ಬಹುದಾದ ಛಂದಸ್ಸೊಂದು ಆತನಿಗೆ ಬೇಕಾಗಿತ್ತು. ಇದಕ್ಕಾಗಿ ಆತನು ಒಂದು ಹೊಸ ಪದ್ಯವನ್ನು ನಿರ್ಮಿಸಿಕೊಳ್ಳಲಿಲ್ಲ; ಕನ್ನಡಕವಿಗಳು ಕ್ವಚಿತ್ತಾಗಿ ಉಪಯೋ ಗಿಸುತ್ತಿದ್ದ ರಗಳೆಯನ್ನು ಉಪಯೋಗಿಸಿಕೊಂಡನು. ರಗಳೆಯಲ್ಲಿ ಪಾದಸಂಖ್ಯೆಯ ನಿಯಮವಿಲ್ಲವಾದ ಕಾರಣ ಕಥೆ ತಡೆಯಿಲ್ಲದೆ ಎಷ್ಟುದೂರ ಬೇಕಾದರೂ ಹೋಗ ಬಹುದು. ಆದರೆ ರಗಳೆಯಲ್ಲಿ ಸಮಗ್ರಗ್ರಂಥವನ್ನು ರಚನೆಮಾಡುವ ಸಂಪ್ರದಾಯ ವಿರಲಿಲ್ಲ. ಹರಿಹರನು ಸಂಪ್ರದಾಯ ಶರಣನಲ್ಲ, ಎಂದರೆ ಸಂಪ್ರದಾಯಕ್ಕೆ ಭಯ ಪಟ್ಟು ತನ್ನ ಮನಸ್ಸಿಗೆ ಸರಿಯಲ್ಲವೆಂದು ತೋರಿದ್ದನ್ನು ಒಪ್ಪಿಕೊಳ್ಳುವುದಾಗಲಿ ಸರಿ ಯೆಂದು ತೋರಿದ್ದನ್ನು ಬಿಡುವುದಾಗಲಿ ಹರಿಹರನ ಸ್ವಭಾವವಲ್ಲ. ಭಾಷೆಯ ವಿಷಯದಲ್ಲಿ ಹೇಗೆ ರಳಕುಳಕ್ಷಳಗಳ ಸಂಬಂಧದ ನಿಯಮವು ಅರ್ಥವಿಲ್ಲ ದ್ದೆಂದು ಘಂಟಾಘೋಷವಾಗಿ ಹೇಳಿ ಆ ನಿಯಮವನ್ನು ಧೈರ್ಯವಾಗಿ ಉಲ್ಲಂ ಘಿಸಿದನೋ ಛಂದಸ್ಸಿನ ವಿಷಯದಲ್ಲಿಯೂ ಹಾಗೆಯೇ ಕಥಾಕಾವ್ಯಕ್ಕೆ ಕಂದ ವೃತ್ತಗಳು ಅನುಗುಣವಲ್ಲವೆಂಬುದನ್ನೂ ರಗಳೆಯೇ ಅನುಗುಣವಾದದ್ದೆಂಬು ದನ್ನೂ ಕಂಡುಕೊಂಡು ಸಂಪ್ರದಾಯಕ್ಕೆ ಲಕ್ಷ್ಯಮಾಡದೆ ತನ್ನ ಕಾವ್ಯಗಳನ್ನು ರಗಳೆಯಲ್ಲಿಯೇ ರಚಿಸಿದನು.[1]

ಕಥೆ ಚಿಕ್ಕದಾಗಿದ್ದಾಗ ರಗಳೆ ಸರಿಹೋಗುತ್ತದೆ; ದೊಡ್ಡದಾದಾಗ ಸರಿ ಹೋಗುವುದಿಲ್ಲ. ಏಕೆಂದರೆ ಪಾದನಿಯಮವಿಲ್ಲದ್ದರಿಂದ ಅದು ಕಥಾಕಾವ್ಯಕ್ಕೆ ಅನುಗುಣವಾದ ಛಂದಸ್ಸಾದರೂ ಆದಿಯಲ್ಲಿಯೂ ಅಂತ್ಯದಲ್ಲಿಯೂ ಪ್ರಾಸಬದ್ಧ ವಾಗಿರುವುದರಿಂದ ಅದರ ಗತಿಯ ಸ್ವಾತಂತ್ರ್ಯಕ್ಕೆ ಒಂದು ತಡೆ ಇರುತ್ತದೆ. ಕಂದವೃತ್ತಗಳು ನಾಲ್ಕು ಪಾದಗಳುಳ್ಳ ಪದ್ಯಗಳಾದರೆ, ಇದು ಎರಡು ಪಾದ ಗಳುಳ್ಳ ಪದ್ಯಗಳ ಸಮೂಹವಾಗಿ ಪರಿಣಮಿಸುತ್ತದೆ. ಆದ್ಯಂತಗಳಲ್ಲಿ ಪ್ರಾಸವುಳ್ಳ ಎರಡೆರಡು ಪಾದಗಳು ಪುನಃ ಪುನಃ ಬಹುಕಾಲ ಕಿವಿಗೆ ಬೀಳುತ್ತಾ ಹೋದರೆ ಪದ್ಯದ ಗತಿಯಲ್ಲಿ ವೈವಿಧ್ಯವಿಲ್ಲದೆ ಮನಸ್ಸಿಗೆ ಬೇಸರವಾಗುತ್ತದೆ. ಇದನ್ನು ಅರಿತು ಹರಿಹರನು ಕೆಲವು ಶಿವಶರಣರ ರಗಳೆಗಳಲ್ಲಿ ಗದ್ಯವನ್ನೂ ಉಪಯೋಗಿಸಿ ಕೊಂಡಂತೆ ತೋರುತ್ತದೆ. ಪ್ರಾಸದ ಬಂಧನವನ್ನು ತೆಗೆದುಹಾಕಿದರೆ ಈ ಛಂದಸ್ಸು ತನ್ನ ಕಾವ್ಯಕ್ಕೆ ಅನುಕೂಲವಾಗುತ್ತದೆಂಬುದನ್ನು ಹರಿಹರನು ಕಂಡು

[1] ಹರಿಹರನ ಈ ಮೇಲ್ಪಂಕ್ತಿಯನ್ನು ಹೆಚ್ಚು ಜನ ಕವಿಗಳು ಅನುಸರಿಸಲಿಲ್ಲ. ಷಟ್ಪದಿ ಪ್ರಚಾರಕ್ಕೆ ಬಂದದ್ದೇ ಇದಕ್ಕೆ ಕಾರಣವೆಂದು ತೋರುತ್ತದೆ.

ಕೊಳ್ಳಲಿಲ್ಲ. ಈಗಿನ ಕಾಲದ ಕೆಲವರು ಹೊಸ ಕವಿಗಳು ಮಾಡುವಂತೆ ಹರಿಹರನು ಪ್ರಾಸದ ಕಟ್ಟನ್ನೂ ಮುರಿದು ಹಾಕಿದ್ದರೆ ಆತನು ರಗಳೆಯ ಕಾವ್ಯಗಳಲ್ಲಿ ಗದ್ಯವನ್ನು ಸೇರಿಸಿಕೊಳ್ಳಬೇಕಾದ ಆವಶ್ಯಕತೆಯುಂಟಾಗುತ್ತಿರಲಿಲ್ಲವೆಂದು ತೋರುತ್ತದೆ. ಅದು ಏನೇ ಆಗಲಿ, ಹರಿಹರನು ಕಥಾಕಾವ್ಯರಚನೆಗೆ ಒಂದು ಹೊಸ ಮಾರ್ಗವು ಆವಶ್ಯಕವೆಂಬುದನ್ನು ಕಂಡುಹಿಡಿಯುವುದರಲ್ಲಿ ತೋರಿಸಿದ ಪ್ರಜ್ಞಾತಿಶಯವೂ ಅದನ್ನು ಅನುಸರಿಸುವುದರಲ್ಲಿ ತೋರಿದ ಆತ್ಮವಿಶ್ವಾಸ ಧೈರ್ಯಸಾಹಸಗಳೂ ಸ್ತುತ್ಯವಾದುವು.

ಹರಿಹರನು ರಗಳೆಯ ಜತೆಗೆ ಗದ್ಯವನ್ನೂ ಸೇರಿಸಿದನಷ್ಟೆ. ಹೀಗೆ ಗದ್ಯವನ್ನು ಪದ್ಯದೊಡನೆ ಸೇರಿಸುವುದು ಕನ್ನಡ ಸಾಹಿತ್ಯದಲ್ಲಿ ಹೊಸದೇನೂ ಆಗಿರಲಿಲ್ಲ. ಚಂಪೂಕಾವ್ಯಗಳಲ್ಲಿ ಉಪಯೋಗಿಸುತ್ತಿದ್ದರು. ಆದರೆ ಹರಿಹರನು ಗದ್ಯವನ್ನು ಚಂಪೂಕಾವ್ಯಲೇಖಕರಂತೆ ಉಪಯೋಗಿಸಿಲ್ಲ. ಚಂಪೂಕಾವ್ಯಗಳಲ್ಲಿ ಅದು ಸಾಮಾನ್ಯವಾಗಿ ಪದ್ಯಗಳ ಮಧ್ಯದಲ್ಲಿ ಅಲ್ಪಸ್ವಲ್ಪವಾಗಿ ಬರುತ್ತದೆ. ಹರಿಹರನು ಗದ್ಯವನ್ನು ಹಾಗೆ ಅಲ್ಲಿಷ್ಟು ಇಲ್ಲಿಷ್ಟು ಉಪಯೋಗಿಸದೆ ಒಂದು ಸಂಪೂರ್ಣ ಸ್ಥಲವನ್ನೇ ಅದರಲ್ಲಿ ರಚಿಸುತ್ತಾನೆ. ಗದ್ಯವು ಬರುವ ರಗಳೆಗಳಲ್ಲಿ ಒಂದು ಸ್ಥಲವು ರಗಳೆಯಲ್ಲಿಯೂ ಇನ್ನೊಂದು ಗದ್ಯದಲ್ಲಿಯೂ ಹೀಗೆ ಒಂದಾದ ಮೇಲೊಂದು ರಚಿತವಾಗಿರುತ್ತವೆ. ಇದರಿಂದ ಕಥಾಕಾವ್ಯರಚನೆಗೆ ಪದ್ಯಗಳಲ್ಲಿ ಹೇಗೆ ರಗಳೆ ಉಚಿತವಾದದ್ದೋ ಹಾಗೆಯೇ ಗದ್ಯವೂ ಉಚಿತವಾದದ್ದೆಂಬುದನ್ನು ಹರಿಹರನು ಕಂಡುಕೊಂಡಂತೆ ತೋರುತ್ತದೆ. ಹೀಗೆ ಹೇಳುವುದರಿಂದ ಹರಿಹರನಿಗೆ ಹಿಂದೆ ಯಾರೂ ಗದ್ಯದಲ್ಲಿ ಕಾವ್ಯರಚನೆಮಾಡಿರಲಿಲ್ಲವೆಂದು ಅರ್ಥವಲ್ಲ. ಬಹಳ ಹಿಂದಿನ ಕಾಲದಲ್ಲಿಯೇ ಎಂದರೆ ಒಂಭತ್ತನೆಯ ಶತಮಾನಕ್ಕೆ ಹಿಂದೆಯೇ "ಗದ್ಯಕಥಾ" ಎಂಬ ಹೆಸರುಳ್ಳ ಕೆಲವು ಗದ್ಯಗ್ರಂಥಗಳು ರಚಿತವಾಗಿದ್ದುವೆಂದು ಕವಿರಾಜಮಾರ್ಗದಿಂದ ತಿಳಿದುಬರುತ್ತದೆ. ಹತ್ತನೆಯ ಶತಮಾನದಿಂದೀಚೆಯ ಕವಿಗಳು ಯಾರೂ ಆ ಕವಿಗಳ ಹೆಸರನ್ನೆತ್ತದಿರುವುದರಿಂದ ಹರಿಹರನಿಗೆ ಆ ಕಾವ್ಯಗಳ ಪರಿಚಯವಿದ್ದಂತೆ ತೋರುವುದಿಲ್ಲ. ಹರಿಹರನ ಕಾಲಕ್ಕೆ ಹಿಂದೆ ಹುಟ್ಟಿ ಈಗ ದೊರೆಯುವ ಗದ್ಯಕಾವ್ಯವು ಚಾವುಂಡರಾಯಪುರಾಣವೊಂದೇ. ಅದರ ಪರಿಚಯವಾದರೂ ಹರಿಹರನಿಗೆ ಇತ್ತೆಂಬುದು ಸಂಶಯಾಸ್ಪದವಾದ ವಿಷಯ. ಆದಕಾರಣ ಗದ್ಯದ ಈ ಉಪಯೋಗವನ್ನು ಕಂಡುಕೊಂಡ ಗೌರವವೂ ಹರಿಹರನಿಗೆ ಸಲ್ಲಬೇಕೆಂದು ತೋರುತ್ತದೆ.

ಹರಿಹರನ ರಗಳೆಗಳಲ್ಲಿ ರಗಳೆಯೂ ಗದ್ಯವೂ ಜತೆಜತೆಗೆ ಬರುವುದರಿಂದ

ಗದ್ಯವು ರಗಳೆಗೆ ಹೊಂದಿಕೆಯಾಗುವಂತೆ ಇರಬೇಕಾಗುತ್ತದೆ. ಆದಕಾರಣವೇ ಈ ಗದ್ಯದ ಶೈಲಿಯಲ್ಲಿ ಅನೇಕವೇಳೆ ರಗಳೆಯ ಧಾಟಿ ಅಥವಾ ಗತಿ ಇರುತ್ತದೆ. ಹರಿಹರನದು ಕೇವಲ ಶಾಸ್ತ್ರಬದ್ಧವಾದ ಕೃತಕವಾದ ಗ್ರಾಂಥಿಕ ಗದ್ಯವಲ್ಲ. ಆತನು ಆಗಾಗ ಜನರು ಆಡುವ ಭಾಷೆಯಲ್ಲಿ ಬಳಕೆಯಲ್ಲಿದ್ದ ಮಾತುಗಳನ್ನೂ ವಾಕ್ಯ ವಿನ್ಯಾಸಗಳನ್ನೂ ಪ್ರಯೋಗಿಸುವುದರಿಂದ ಈ ಗದ್ಯವು ಆಗಿನ ಕಾಲದ ಜನರು ಮಾತಾಡುತ್ತಿದ್ದ ಭಾಷೆಗೆ ಸಂಬಂಧಿಸಿದ್ದಾಗಿರುತ್ತದೆ. ಹರಿಹರನ ರಗಳೆಗಳಲ್ಲಿ ಗದ್ಯವು ಹೆಚ್ಚಾಗಿ ದೊರೆಯುವುದರಿಂದ ಆಗಿನ ಕಾಲದಲ್ಲಿ ಕನ್ನಡಭಾಷೆ ಹೇಗಿತ್ತೆಂಬುದನ್ನು ತಿಳಿದುಕೊಳ್ಳಲು ಈ ರಗಳೆಗಳು ಒಳ್ಳೆಯ ಸಾಧನವಾಗಿವೆ.

ಹರಿಹರನು ಗ್ರಂಥರಚನೆಮಾಡಿದ್ದು ಶಿವಶರಣರ ಪುಣ್ಯಚರಿತ್ರೆಯನ್ನು ಸಾಮಾನ್ಯಜನರಿಗೆ ತಿಳಿಸುವುದಕ್ಕಾಗಿ. ಆತನು ರಗಳೆಯ ಛಂದಸ್ಸನ್ನು ಆರಿಸಿಕೊಂಡದ್ದಕ್ಕೆ ಅದು ಸಾಮಾನ್ಯಜನರಿಗೆ ಪ್ರಿಯವಾದದ್ದೆಂಬುದೂ ಒಂದು ಕಾರಣವಾಗಿರಬಹುದು. ಭಾಷೆಯ ವಿಷಯದಲ್ಲಿಯೇ ಆಗಲಿ ವರ್ಣನೆ, ಅಲಂಕಾರ ಮೊದಲಾದುವುಗಳ ವಿಷಯದಲ್ಲಿಯೇ ಆಗಲಿ ಹರಿಹರನು ತನ್ನ ಪಾಂಡಿತ್ಯವನ್ನು ತೋರಿಸುವುದಕ್ಕೆ ಪ್ರಯತ್ನಪಟ್ಟಹಾಗೆ ಕಾಣುವುದಿಲ್ಲ. ಗ್ರಂಥವನ್ನು ಸಾಮಾನ್ಯವಾಗಿ ಹಳಗನ್ನಡದ ಶೈಲಿಯಲ್ಲಿ ಬರೆದರೂ ಆಗಿನ ಕಾಲದ ಜನರಲ್ಲಿ ಬಳಕೆಯಲ್ಲಿದ್ದ ಭಾಷೆಯನ್ನು ಮೇಲಿಂದ ಮೇಲೆ ಉಪಯೋಗಿಸುತ್ತಾನೆ. ಕೆಲವುವೇಳೆ ವ್ಯಾಕರಣದ ನಿಯಮವನ್ನು ಕೂಡ ಉಲ್ಲಂಘಿಸುತ್ತಾನೆ. ತನ್ನ ಪ್ರೌಢಿಯನ್ನು ಪಂಡಿತಪಾಠಕರಿಗೆ ಪ್ರದರ್ಶಿಸಬೇಕೆಂಬ ಉದ್ದೇಶದಿಂದ ವರ್ಣನೆಗಳನ್ನಾಗಲಿ ಅಲಂಕಾರಗಳನ್ನಾಗಲಿ ತಂದು ತುಂಬಲು ಪ್ರಯತ್ನಿಸುವುದಿಲ್ಲ. ಇದರಿಂದ ಹರಿಹರನು ಪಂಡಿತನಾಗಿರಲಿಲ್ಲವೆಂದು ನಮ್ಮ ಅಭಿಪ್ರಾಯವಲ್ಲ. ಆತನಲ್ಲಿ ಬೇಕಾದಷ್ಟು ಪಾಂಡಿತ್ಯವಿತ್ತು; ಆತನ ಕಾವ್ಯಗಳಲ್ಲಿ ಎಷ್ಟೋ ಕಡೆ ಈ ಪಾಂಡಿತ್ಯದ ನಿದರ್ಶನಗಳು ದೊರೆಯುತ್ತವೆ. ಆದರೆ ಇದು ತನ್ನ ಪಾಂಡಿತ್ಯಪ್ರದರ್ಶನಕ್ಕಾಗಿ ಬುದ್ಧಿಪೂರ್ವಕವಾಗಿ ಹರಿಹರನು ಬರೆದದ್ದಾಗಿ ತೋರುವುದಿಲ್ಲ. ಅಪ್ರಯತ್ನವಾಗಿ ಅಜ್ಞಾತವಾಗಿ ಅಂಥ ಪ್ರಯೋಗಗಳು ಅದರಲ್ಲಿ ಸೇರಿಕೊಂಡಂತೆ ಕಾಣುತ್ತದೆ.

ಕಥಾಕಾವ್ಯದಲ್ಲಿ ವರ್ಣನೆಗೆ ಯಾವ ಸ್ಥಳವು ದೊರೆಯಬೇಕೆಂಬುದನ್ನು ಹರಿಹರನು ಅರಿತಿದ್ದನು. ಹದಿನೆಂಟು ವರ್ಣನೆಗಳಲ್ಲಿ ಒಂದು ಇಲ್ಲದಿದ್ದರೂ ತಮ್ಮ ಕಾವ್ಯವು ಮಹಾಕಾವ್ಯವಾಗುವುದಿಲ್ಲವಲ್ಲಾ ಎಂದು ತಾವು ಬರೆಯುವ ಕಥೆಗೆ ಬೇಕಿಲ್ಲದಿದ್ದರೂ ಈ ಎಲ್ಲಾ ವರ್ಣನೆಗಳನ್ನು ತಂದು ಅಡಕಿ ಎಳೆಯು

ಮಗುವಿನ ತಲೆಯ ಮೇಲೆ ಒಂದು ದೊಡ್ಡ ಗುಂಡನ್ನು ಹೇರಿದಂತೆ ಸಣ್ಣ ಕಥೆಗೆ ದೊಡ್ಡ ದೊಡ್ಡ ವರ್ಣನೆಗಳನ್ನು ಅನಾವಶ್ಯಕವಾಗಿ ತಂದು ತಗುಲಿಸುವ ಕವಿಗಳೂ ಕನ್ನಡದಲ್ಲುಂಟು. ಹರಿಹರನು ಹೀಗೆ ಮಾಡಿಲ್ಲ. ಆತನು ಅನೇಕ ಶಿವಶರಣರ ಚರಿತ್ರೆಗಳನ್ನು ಬರೆಯಬೇಕಾಗಿ ಇದ್ದದ್ದರಿಂದ ತನ್ನ ಪಾಂಡಿತ್ಯ ವನ್ನೆಲ್ಲ, ಜಾಣ್ಮೆಯನ್ನೆಲ್ಲ ಒಂದೇ ಕಥೆಯಲ್ಲಿ ಮುಗಿಸಬೇಕಾದ ಆವಶ್ಯಕತೆಯೂ ಇರಲಿಲ್ಲ; ಹರಿಹರನಿಗೆ ಹಾಗೆ ಮಾಡಬೇಕೆಂಬ ಉದ್ದೇಶವೂ ಇರಲಿಲ್ಲ. ಯಾವ ಕಥೆಯಲ್ಲಿ ಯಾವ ಸಂದರ್ಭದಲ್ಲಿ ಯಾವ ವರ್ಣನೆ ಎಷ್ಟು ಆವಶ್ಯಕವೋ ಅಷ್ಟನ್ನು ಮಾತ್ರ ತರುತ್ತಾನೆ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಬಸವರಾಜದೇವರ ರಗಳೆಯಿಂದ ಕೊಡಬಹುದು. ಈ ಕಥೆ ಆರಂಭವಾಗುವುದು ಕೈಲಾಸದಲ್ಲಿ; ಈ ರಗಳೆಯಲ್ಲಿ ಕೈಲಾಸಪರ್ವತದ ವರ್ಣನೆಯಿಲ್ಲ. ಬಸವಣ್ಣನವರು ಹುಟ್ಟಿದ್ದು ಬಾಗೆವಾಡಿಯಲ್ಲಿ. ಈ ಸಂದರ್ಭದಲ್ಲಿ ಕೆಲವು ಕನ್ನಡಕವಿಗಳು ಬಹುಶಃ ಸಮುದ್ರ ವರ್ಣನೆಯಿಂದ ಆರಂಭಿಸಿ ಪಟ್ಟಣದ ವರ್ಣನೆಯವರೆಗೂ ಬೇಕಾದಷ್ಟು ವರ್ಣನೆ ಗಳನ್ನು ಸೇರಿಸಬಹುದು. ಆದರೆ ಇಲ್ಲಿ ಬಾಗೆವಾಡಿಯ ವರ್ಣನೆ ನಾಲ್ಕು ಪಾದ ಗಳಲ್ಲಿ ಮುಗಿದುಹೋಗಿದೆ. ಬಸವಣ್ಣನವರ ವಿವಾಹದ ವಿಷಯವು ಕಥೆಯಲ್ಲಿ ಬಂದಿದೆ. ಗಿರಿಜಾಕಲ್ಯಾಣವನ್ನು ಬರೆದ ಕವಿಗೆ ಬಸವಣ್ಣನವರ ವಿವಾಹವನ್ನು ವರ್ಣಿಸುವುದು ಕಷ್ಟವಾಗಿರಲಿಲ್ಲ. ಇಲ್ಲಿ ಆ ವರ್ಣನೆಯ ಗಂಧವೇ ಇಲ್ಲ. ಬಸವಣ್ಣ ನವರ ಧಾರ್ಮಿಕಜೀವನವನ್ನು ಚಿತ್ರಿಸುವ ಕಥೆಗೆ ಇಂಥ ವರ್ಣನೆಗಳು ಅನಾ ವಶ್ಯಕವೆಂದು ತಿಳಿದು ಹರಿಹರನು ಕೈಬಿಟ್ಟಂತೆ ತೋರುತ್ತದೆ. ವರ್ಣಿಸಬೇಕೆಂದು ಉದ್ದೇಶಿಸಿದ ಸಂಗತಿಗಳನ್ನು ಬಹು ವಿಸ್ತಾರವಾಗಿಯೂ ಉಜ್ವಲವಾಗಿಯೂ ಓದುವವರ ಮನಸ್ಸಿಗೆ ಹಿಡಿಯುವಂತೆ ವರ್ಣಿಸಿರುತ್ತಾನೆ. ಉದಾಹರಣೆಗೆ, ಬಸ ವಣ್ಣನವರು ಸಂಗಮೇಶ್ವರನನ್ನು ಪೂಜೆಮಾಡಿದ ವಿಷಯವನ್ನು ವರ್ಣಿಸುವುದಕ್ಕೆ ಒಂದು ಸ್ಥಲವನ್ನೇ ಸಂಪೂರ್ಣವಾಗಿ ಉಪಯೋಗಿಸಿದ್ದಾನೆ. ಈ ವರ್ಣನೆಯು ಎಷ್ಟು ಉಜ್ವಲವಾಗಿರುವುದೆಂದರೆ ನಾಸ್ತಿಕನ ಹೃದಯದಲ್ಲಿಯೂ ಕೂಡ ಭಕ್ತಿ ಭಾವವನ್ನು ಉದ್ರೇಕಿಸುವಂತಿದೆ. ಹಾಗೆಯೇ ಬಸವಣ್ಣನವರು ಮಾಡುತ್ತಿದ್ದ ಗಣಾರಾಧನೆಯನ್ನು ಬಹಳ ವಿಸ್ತಾರವಾಗಿ ನಿರೂಪಿಸಿದ್ದಾನೆ. ಅಷ್ಟೇಕೆ, ಸಂದರ್ಭ ದೊದಗಿದಾಗ (೧೧ನೆಯ ಸ್ಥಲ) ಉಳ್ಳಿಯ ಮೆರೆವಣಿಗೆಯನ್ನು ಕೂಡ ವಿಜೃಂ ಭಣೆಯಿಂದ ವರ್ಣಿಸಿದ್ದಾನೆ.

ಕಥೆಯ ವಿಷಯದಲ್ಲಿಯೂ ಹೀಗೆಯೇ. ತಾನು ಚಿತ್ರಿಸಬೇಕೆಂದು ಹೊರಟಿ ರುವ ಕಥಾನಾಯಕನ ಜೀವನದ ಸಂಗತಿಗಳಲ್ಲಿ ತನ್ನ ಉದ್ದೇಶಕ್ಕೆ ಆವಶ್ಯಕ

ವಾದಷ್ಟನ್ನು ಮಾತ್ರ ಆರಿಸಿಕೊಂಡು ಮಿಕ್ಕುವನ್ನು ಅಲಕ್ಷಿಸುತ್ತಾನೆ. ಬಸವ ರಾಜದೇವರ ರಗಳೆಯಲ್ಲಿ ಹರಿಹರನು ಚಿತ್ರಿಸಬೇಕೆಂದು ಉದ್ದೇಶಿಸಿರುವುದು ಬಸವಣ್ಣನವರ ಅಲೌಕಿಕವಾದ ಧಾರ್ಮಿಕ ಜೀವನವನ್ನು. ಆ ಜೀವನದ ಸಾರಾಂಶವನ್ನು ಈ ರಗಳೆಯಲ್ಲಿ ಒಂದು ಕಡೆ ಶಿವಶರಣರ ಬಾಯಿಂದ ಹೀಗೆ ಹೇಳಿಸಿರುತ್ತಾನೆ—

"ಎಲೆ ಬಸವ....ನಿನ್ನ ನೇಮವಿದಾರ್ಗುಂಟು! ಗುರುಲಿಂಗದೊಳೆರಡಿಲ್ಲ ದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ್ಸ್ವಪ್ನ ಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಿಂ ಮಾಳ್ಪೆ. ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ. ಶಿವಸಮಯವನುದ್ಧರಿಸುವೆ. ಪರಸಮಯವಂ ಸಂಹರಿಸುವೆ. ಲಿಂಗದಲ್ಲಿ ಕಠಿನಮಂ ಕೇಳೆ. ಜಂಗಮದಲ್ಲಿ ಜಾತಿಯನಱಸೆ. ಪ್ರಸಾದದಲ್ಲಿ ಅಪವಿತ್ರತೆಯನಱಯೆ........ಪಾಷಂಡಿಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸುಫಲಂಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣವೇಱಿತು...." (ಸ್ಥಲ ೮: ೩೭-೫೯).

ಈ ಅಂಶವನ್ನೇ ಹರಿಹರನು ಈ ರಗಳೆಯಲ್ಲಿ ವಿಶದೀಕರಿಸಿದ್ದಾನೆ. ಇದಕ್ಕೆ ಬೇಕಾದಷ್ಟು ಸಂಗತಿಗಳನ್ನೇ ಬಸವಣ್ಣನವರ ಜೀವನದಿಂದ ಆತನು ಆರಿಸಿಕೊಂಡಂತೆ ತೋರುತ್ತದೆ. ಇಷ್ಟೇ ಸಂಗತಿಗಳು ಮಾತ್ರ ಹರಿಹರನಿಗೆ ಗೊತ್ತಿದ್ದುವೋ ಅಥವಾ ಹೆಚ್ಚಾದ ಸಂಗತಿಗಳು ತಿಳಿದಿದ್ದರೂ ತನ್ನ ಉದ್ದೇಶಕ್ಕೆ ಅವು ಬಾಹ್ಯವಾದುವೆಂದು ಅವುಗಳನ್ನು ಕೈಬಿಟ್ಟನೋ ತಿಳಿಯದು. ಅಂತೂ ಬಸವಣ್ಣನವರ ಅಲೌಕಿಕವಾದ ಧಾರ್ಮಿಕ ಜೀವನಕ್ಕೆ ಸಂಬಂಧಪಡದ ಸಂಗತಿಗಳು ಬೇರೆಯ ದೃಷ್ಟಿಯಿಂದ ಎಷ್ಟೇ ಮುಖ್ಯವಾಗಿದ್ದರೂ ಈ ಗ್ರಂಥದಲ್ಲಿ ಉಕ್ತವಾಗಿಲ್ಲ. ಉದಾಹರಣೆಗೆ, ಬಸವಣ್ಣನವರ ತಂದೆತಾಯಿಗಳು ಶಿವಭಕ್ತರಾಗಿದ್ದರೆಂಬುದು ಹೊರತು ಅವರ ವಿಷಯವಾಗಿ ಮತ್ತೇನು ಈ ಗ್ರಂಥದಿಂದ ಗೊತ್ತಾಗುತ್ತದೆ? ಬಸವಣ್ಣನವರು ಬಾಲ್ಯದಲ್ಲಿ ತಂದೆತಾಯಿಗಳನ್ನು ಕಳೆದುಕೊಂಡು ಮುತ್ತಜ್ಜಿಯ ಪೋಷಣೆಯಲ್ಲಿದ್ದರೆಂದೂ "ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು" ವೀರಶಿವಭಕ್ತಿಯನ್ನು ಕೈಕೊಂಡರೆಂದೂ ಹೇಳಿದೆ. ಈ ಮಧ್ಯ

ದಲ್ಲಿ ನಡೆದ ಸಂಗತಿಗಳು ಯಾವುವು? "ಶಿವಭಕ್ತಿ ಮುತ್ತ್ರಂತಿರ್ದ" ಆ ಮುತ್ತ್ರಬ್ಬೆಯ ಗತಿಯೇನಾಯಿತು? ಬಸವಣ್ಣನವರು ಮಂಗಳವಾಡಕ್ಕೆ ಹೋಗಿ ಬಿಜ್ಜಳನ ಭಂಡಾರದಲ್ಲಿ ಒಂದು ನೌಕರಿಗೆ ಸೇರಿ ಸಿದ್ಧದಂಡೇಶನ ಮನೆಯಲ್ಲಿ ವಾಸ ಮಾಡುತ್ತಿದ್ದರೆಂದು ಹೇಳಿದೆ. ಆಮೇಲೆ ಸಿದ್ಧದಂಡೇಶನು ಸಾಯುವವರೆಗೂ ಯಾವ ಸಂಗತಿಗಳೂ ಜರುಗಲಿಲ್ಲವೆ? ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಉನ್ನತಪದವಿಯನ್ನು ಪಡೆದರಷ್ಟೆ; ಅವರಿಬ್ಬರಿಗೂ ರಾಜಕೀಯವಾದ ಯಾವ ವ್ಯವಹಾರಗಳು ನಡೆಯುತ್ತಿದ್ದುವು? ಬಸವಣ್ಣನವರು ರಾಜ್ಯದ ಆಡಳಿತದಲ್ಲಿ ನಿರ್ವಹಿಸುತ್ತಿದ್ದ ಕೆಲಸದ ವಿವರವೇನು? ಬಸವಣ್ಣನವರು ಉನ್ನತಪದವಿಗೆ ಬಂದ ಮೇಲೆ ಗಂಗಾದೇವಿ ಮಾಯಿದೇವಿಯರನ್ನು ಮದುವೆಯಾದರೆಂದು ಹೇಳಿದೆ. ಈ ಗಂಗಾದೇವಿ ಮಾಯಿದೇವಿಯರು ಯಾರು? ಬಸವಣ್ಣನವರು ಇಬ್ಬರನ್ನೂ ಒಟ್ಟಿಗೇ ಮದುವೆಯಾದರೆ, ಬೇರೆಬೇರೆ ಕಾಲಗಳಲ್ಲಿ ಮದುವೆಯಾದರೆ? ಇವೇ ಮೊದಲಾದ ಯಾವ ಪ್ರಶ್ನೆಗಳಿಗೂ ಈ ರಗಳೆಯಲ್ಲಿ ಉತ್ತರವು ದೊರೆಯುವಂತಿಲ್ಲ. ಬಸವಣ್ಣನವರ ಧಾರ್ಮಿಕಜೀವನದ ನಿರೂಪಣಕ್ಕೆ ಈ ಸಂಗತಿಗಳು ಆವಶ್ಯಕವಲ್ಲವೆಂದೇ ಇವನ್ನು ಹೀಗೆ ಹರಿಹರನು ಉಪೇಕ್ಷಿಸಿರುವನೆಂದು ತೋರುತ್ತದೆ. ಆತನಿಗೆ ಮುಖ್ಯವಾಗಿ ಬೇಕಾಗಿದ್ದ ವಿಷಯಗಳು ಬಸವಣ್ಣನವರ ಗುರುಲಿಂಗಜಂಗಮಾರಾಧನೆ ಮತ್ತು "ಪ್ರತ್ಯಕ್ಷ" (ಪವಾಡ, ಮಾಹಾತ್ಮ್ಯ) ಗಳು. ಧಾರ್ಮಿಕಮಹಾಪುರುಷರ ಜೀವನದಲ್ಲಿ ಅದ್ಭುತಕಾರ್ಯಗಳು ನಡೆಯುವುದೇ ಆ ಜೀವನದ ಒಂದು ಮುಖ್ಯ ಲಕ್ಷಣವೆಂದು ಭಾವಿಸುವುದು ನಮ್ಮ ಜನಗಳ ಸಂಪ್ರದಾಯವಾಗಿರುವುದರಿಂದ ಹರಿಹರನು ಈ ದೃಷ್ಟಿಯಿಂದಲೇ ಬಸವಣ್ಣನವರ ಜೀವನವನ್ನು ನೋಡಿರಬೇಕು. ಆ ಜೀವನದಲ್ಲಿ ಯಾವ ಸಂಗತಿ ಮುಖ್ಯ, ಯಾವುದು ಅಮುಖ್ಯ—ಎಂಬುದನ್ನು ನಿರ್ಣಯಿಸುವುದಕ್ಕೆ ಇದೇ ಆತನಿಗೆ ಒರೆಗಲ್ಲಾಗಿರಬೇಕು. ಹರಿಹರನು ಕಥೆಯನ್ನು ಹೇಗೆ ಬೆಳೆಸಿರುವನೆಂಬುದನ್ನು ಈ ದೃಷ್ಟಿಯಿಂದ ನಿರೀಕ್ಷಣಮಾಡಿದರೆ ಈ ರಗಳೆಯಲ್ಲಿ ಬಂದಿರುವ ಸಂಗತಿಗಳ ಔಚಿತ್ಯವು ಸ್ಪಷ್ಟವಾಗುತ್ತದೆ.[1]

ಈ ಕಥೆಯಲ್ಲಿ ಬಸವಣ್ಣನವರ ಜೀವನವು ವಿಕಾಸಗೊಳ್ಳುವ ರೀತಿ ಸಹಜವೂ ಸ್ಫುಟವೂ ಆಗಿದೆ. ಬಸವಣ್ಣನವರಿಗೆ ಪ್ರಾಯವು ಬಂದಾಗ ಅವರಿಗೆ ಸಾಂಪ್ರ

---

[1] ಈಗ ದೊರೆತಿರುವುದು ಈ ರಗಳೆಯ ಅರ್ಧಭಾಗವಷ್ಟೆ; ಇದರಲ್ಲಿ ಬಸವಣ್ಣನವರ ಪವಾಡಗಳು ಕೆಲವು ವರ್ಣಿತವಾಗಿವೆ. ಮಿಕ್ಕ ಅರ್ಧಭಾಗದಲ್ಲಿ ಇನ್ನೂ ಅನೇಕ ಪವಾಡಗಳು ವರ್ಣಿತವಾಗಿರಬೇಕು.

ದಾಯಿಕಮತದಲ್ಲಿ ಅನಾದರಣೆ ಹುಟ್ಟಿ ಹೊಸ ಧಾರ್ಮಿಕಭಾವನೆಯುಂಟಾಗುವುದು; ಅವರು ಸ್ವಜನವನ್ನೂ ಸ್ವಗ್ರಾಮವನ್ನೂ ಪರಿತ್ಯಾಗಮಾಡಿ ಒಂದು ಪುಣ್ಯಕ್ಷೇತ್ರವನ್ನು ಸೇರುವುದು; ಅಲ್ಲಿ ಕೆಲವು ಕಾಲ ಶಿವಪೂಜೆಯಲ್ಲಿ ನಿರತರಾಗಿದ್ದು ಈಶ್ವರಪ್ರೇರಿತರಾಗಿ ಬಿಜ್ಜಳನ ರಾಜಧಾನಿಗೆ ಹೋಗುವುದು; ಅಲ್ಲಿ ಅನುಕೂಲಸಂದರ್ಭವೊದಗಿ ಅವರಿಗೆ ನೌಕರಿಯೂ ತಮ್ಮ ಸ್ವಜನವಾದ ಸಿದ್ಧದಂಡಾಧಿಪನ ಆಶ್ರಯವೂ ದೊರೆಯುವುದು; ಕಾಲಕ್ರಮದಲ್ಲಿ ತಮ್ಮ ಜಾಣ್ಮೆಯಿಂದ ಇವರು ಬಿಜ್ಜಳನ ಮೆಚ್ಚಿಗೆಯನ್ನು ಪಡೆದು ಉನ್ನತ ಪದವಿಗೇರುವುದು; ಇವರು ಹೀಗೆ ಉನ್ನತ ಪದವಿಗೆ ಬಂದಾಗ ಇವರ ಪಂಥದ ಜನರು ಪ್ರಾಬಲ್ಯವನ್ನು ಹೊಂದುವುದು; ಇದರಿಂದ ಹಳೆಯ ಸಂಪ್ರದಾಯದವರಿಗೂ ಬಸವಣ್ಣನವರ ಪಂಥದವರಿಗೂ ದ್ವೇಷಾಸೂಯೆಗಳು ಬೆಳೆಯುವುದು; ಇದರ ಫಲವಾಗಿ ಬಸವಣ್ಣನವರಿಗೂ ಬಿಜ್ಜಳನಿಗೂ ವೈಮನಸ್ಯಕ್ಕೆ ಕಾರಣಗಳು ಒದಗುವುದು—ಇವೆಲ್ಲವೂ ಸ್ವಾಭಾವಿಕವಾಗಿ ನಡೆಯಬಹುದಾದುವು. ಬಸವಣ್ಣನವರಿಗೆ ಸಂಬಂಧಪಟ್ಟ ಅನೇಕ ಸಂಗತಿಗಳನ್ನು ನಿರೂಪಿಸುವ ಕ್ರಮದಲ್ಲೇ ಹರಿಹರನು ಅವರ ಜೀವನದ ಈ ಮೂಲರೇಖೆಗಳು ಸುಸ್ಪಷ್ಟವಾಗುವಂತೆ ಕಾವ್ಯರಚನೆಮಾಡಿದ್ದಾನೆ. ತನ್ನ ನೈಪುಣ್ಯದಿಂದ ಬಸವಣ್ಣನವರ ವ್ಯಕ್ತಿಚಿತ್ರಕ್ಕೆ ಜೀವಕಳೆಯನ್ನು ಕೊಟ್ಟಿದ್ದಾನೆ. ಬಸವಣ್ಣನವರ ಅಲೌಕಿಕ ಕಾರ್ಯಗಳನ್ನೂ ಅದ್ಭುತಗಳನ್ನೂ ಮಹಿಮೆಗಳನ್ನೂ ಹರಿಹರನು ಮೇಲಿಂದ ಮೇಲೆ ಉದ್ಘೋಷಿಸಿದ್ದರೂ ಅವರ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆಮಾಡಿಲ್ಲ.

ಇನ್ನೆರಡು ಮಾತುಗಳನ್ನು ಹೇಳಿ ಈ ವಿಮರ್ಶೆಯನ್ನು ಮುಗಿಸಬಹುದು. ಈ ಕಾವ್ಯದಲ್ಲಿ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ಹಲವು ಕಡೆ ಬರುತ್ತವೆ. ಆದರೆ ಈ ಅಲಂಕಾರಗಳನ್ನು ಹರಿಹರನು ಪ್ರಯತ್ನಪಟ್ಟು ತರುವುದಿಲ್ಲ. ಅವು ತಾವಾಗಿಯೇ ಸಹಜವಾಗಿ ಸಂದರ್ಭಕ್ಕನುಗುಣವಾಗಿ ರೂಪುಗೊಳ್ಳುತ್ತವೆ. ಇವನಿಗೆ ಕ್ಲಿಷ್ಟವಾದ ಪಂಡಿತಪ್ರಿಯವಾದ ಅಪ್ರಚುರವಾದ ಅಲಂಕಾರಗಳಲ್ಲಿ ಆಸಕ್ತಿ ಕಡಿಮೆ. ಈ ಗ್ರಂಥದಲ್ಲಿ ಹೆಚ್ಚಾಗಿ ಬರತಕ್ಕವು ರೂಪಕ, ಉಪಮೆ, ಉತ್ಪ್ರೇಕ್ಷೆ ಮೊದಲಾದ ಬಳಕೆಯಲ್ಲಿರುವ ಹಿತಕರವಾದ ಅಲಂಕಾರಗಳು. ರೂಪಕವನ್ನಂತೂ ಕೆಲವು ಕಡೆಗಳಲ್ಲಿ ಬಹಳ ಮನೋಜ್ಞವಾಗಿ ತಂದಿದ್ದಾನೆ. ಈತನು ನಿರೂಪಿಸುವ ವಿಷಯವು ಮತಧರ್ಮಗಳಿಗೆ ಸಂಬಂಧಪಟ್ಟಿದ್ದರೂ ಈತನು ನೀರಸವಾದ ತತ್ವವಿಚಾರಗಳಿಗೂ ಚರ್ಚೆಗಳಿಗೂ ಕೈಹಾಕಿಲ್ಲ.

ಈತನು ಬೋಧಿಸಬೇಕೆಂದಿರುವ ನೀತಿಯೆಲ್ಲಾ ಅಜ್ಞಾತವಾಗಿ ಪಾಠಕರ ಹೃದಯವನ್ನು ಪ್ರವೇಶಿಸುತ್ತದೆ.

ಒಟ್ಟಿನಲ್ಲಿ ಹರಿಹರನು ಸಹಜಕವಿ. ತನ್ನ ಕಾವ್ಯದ ಪರಿಣಾಮವು ಪಾಠಕರ ಮೇಲೆ ಯಾವ ರೀತಿ ಆಗಬೇಕೆಂದು ನಿರ್ಧರಿಸಿಕೊಂಡು ಆ ಸಮಗ್ರಪರಿಣಾಮಕ್ಕೆ ಭಂಗಬಾರದಂತೆ ತನ್ನ ಕಾವ್ಯದ ಅಂಗಗಳನ್ನು ಜೋಡಿಸಿರುತ್ತಾನೆ. ಕಥೆಯಾಗಲಿ, ವರ್ಣನೆಯಾಗಲಿ, ಅಲಂಕಾರವಾಗಲಿ, ಯಾವುದೇ ಆಗಲಿ ತನ್ನ ಸ್ಥಾನವನ್ನು ಮೀರದಂತೆ ನೋಡಿಕೊಳ್ಳುತ್ತಾನೆ. ಹೀಗೆ ರಸೈಕ್ಯವನ್ನು ತಂದು ಬಸವರಾಜದೇವರ ರಗಳೆಯನ್ನು ಒಂದು ಶ್ಲಾಘ್ಯವಾದ ಕಾವ್ಯವನ್ನಾಗಿ ಮಾಡಿದ್ದಾನೆ.

---

ಈ ಗ್ರಂಥವನ್ನು ಎರಡು ಹಸ್ತಲಿಖಿತಪ್ರತಿಗಳ ಆಧಾರದಿಂದ ಮುದ್ರಿಸಿದೆ. ಇವುಗಳಲ್ಲಿ ಒಂದು ಓಲೆಯಪ್ರತಿ; ಇದನ್ನು 'ಕ' ಎಂದು ಕರೆದಿದೆ. ಇದರಲ್ಲಿ ಹನ್ನೆರಡು ಸ್ಥಲಗಳಿವೆ. ಇನ್ನೊಂದು ಕಾಗದದ ಪ್ರತಿ; ಇದನ್ನು 'ಖ' ಎಂದು ಕರೆದಿದೆ. ಇದರಲ್ಲಿ ಹನ್ನೆರಡು ಸ್ಥಲಗಳೂ ಹದಿಮೂರನೆಯ ಸ್ಥಲದಲ್ಲಿ ಸ್ವಲ್ಪಭಾಗವೂ ಇವೆ. ಈ ಎರಡರಲ್ಲಿ ಓಲೆಯ ಪುಸ್ತಕದ ಪಾಠವು ಉತ್ತಮವಾಗಿದ್ದುದರಿಂದ ಸಾಮಾನ್ಯವಾಗಿ ಅದರ ಪಾಠವನ್ನೇ ಇಲ್ಲಿ ಅನುಸರಿಸಿದೆ. ಈ ಗ್ರಂಥದಲ್ಲಿ ಅರ್ಧಕ್ಕೆ ಅರ್ಧಭಾಗವೇ ದೊರೆತಿಲ್ಲ. ಬೇರೆ ಹಸ್ತಲಿಖಿತಪ್ರತಿಗಳು ಎಷ್ಟು ವಿಚಾರಿಸಿದರೂ ದೊರೆಯಲಿಲ್ಲ. ಆದಕಾರಣ ಈ ಗ್ರಂಥವನ್ನು ತೃಪ್ತಿಕರವಾಗಿ ಪರಿಷ್ಕರಿಸಲು ಆಗಿಲ್ಲ. ಇನ್ನು ಮುಂದೆಯಾದರೂ ಬೇರೆಯ ಪ್ರತಿಗಳು ಹೊರಬಿದ್ದರೆ ಈ ಕಾರ್ಯವನ್ನು ಸಮರ್ಪಕವಾಗಿ ನೆರವೇರಿಸಲು ಸಾಧ್ಯವಾಗಬಹುದು.

ಭಾಷೆಯ ದೃಷ್ಟಿಯಿಂದ ವಿಚಾರಾರ್ಹವಾದ ಕೆಲವಂಶಗಳು ಈ ಗ್ರಂಥದಲ್ಲಿವೆ. ಸಾಮಾನ್ಯವಾಗಿ ಹಳಗನ್ನಡದ ಶಬ್ದರೂಪಗಳು ಪ್ರಯೋಗವಾಗುತ್ತವೆ. ಜತೆಗೆ ಕೆಲವು ವೇಳೆ ಹೊಸಗನ್ನಡದ ರೂಪಗಳೂ ಬರುತ್ತವೆ. ಭಾಷೆ ಸಾಮಾನ್ಯವಾಗಿ ವ್ಯಾಕರಣಬದ್ಧವಾಗಿದ್ದರೂ ವ್ಯಾಕರಣನಿಯಮಗಳಿಗೆ ಹೊಂದದ ಕೆಲವು ಪ್ರಯೋಗಗಳೂ ದೊರೆಯುತ್ತವೆ. ಹರಿಹರನ ಕಾಲದಲ್ಲಿ ಕನ್ನಡ ಭಾಷೆ ಹಳಗನ್ನಡದ ರೂಪದಿಂದ ಹೊಸಗನ್ನಡದ ರೂಪಕ್ಕೆ ತಿರುಗುತ್ತಿತ್ತು. ಹರಿಹರನೂ ಕೆಲವು ಹೊಸ ರೂಪಗಳನ್ನು ಪ್ರಯೋಗಿಸಿರಬಹುದು. ಆದರೆ

ಈ ಗ್ರಂಥದಲ್ಲಿ ದೊರೆಯುವ ವಿಶೇಷಪ್ರಯೋಗಗಳೆಲ್ಲವೂ ಹರಿಹರನವೋ ಅಥವಾ ಗ್ರಂಥವನ್ನು ಪ್ರತಿಮಾಡಿದವರವೋ ನಿರ್ಧರಿಸುವುದು ಕಷ್ಟ. ನಮ್ಮ ಮನಸ್ಸಿಗೆ ತೋರಿದಂತೆ ಗ್ರಂಥವನ್ನು ತಿದ್ದಿ ಬಿಡುವುದಕ್ಕಿಂತಲೂ ಹಸ್ತಲಿಖಿತಪ್ರತಿಗಳಲ್ಲಿ ಕಂಡು ಬರುವ ಪ್ರಯೋಗಗಳಿಗೂ ತಕ್ಕಷ್ಟು ಗೌರವವನ್ನು ಕೊಡುವುದು ನ್ಯಾಯವೆಂದು ಭಾವಿಸಿ ಸಾಧ್ಯವಾದಮಟ್ಟಿಗೆ ಹಸ್ತಲಿಖಿತಪ್ರತಿಗಳಲ್ಲಿದ್ದ ರೂಪಗಳನ್ನೇ ಉಳಿಸಿ ರುತ್ತೇವೆ. ಉದಾಹರಣೆಗೆ, 'ನುಡಿವುತಂ', 'ಈವುತಂ' ಮೊದಲಾದ ಪ್ರಯೋಗ ಗಳು ಹಳಗನ್ನಡ ಹೊಸಗನ್ನಡ ಎರಡಕ್ಕೂ ಹೊಂದುವುದಿಲ್ಲ. ಇಲ್ಲಿರುವ ವಕಾ ರಾಗಮಕ್ಕೆ ಬದಲಾಗಿ ಯಕಾರಾಗಮವು ಬರಬೇಕು. ಆದರೆ ಈ ಗ್ರಂಥದಲ್ಲಿ ಇಂಥ ಪ್ರಯೋಗಗಳು ಬೇಕಾದಷ್ಟು ಬರುತ್ತವೆ. ಎರಡು ಪ್ರತಿಗಳಲ್ಲಿಯೂ ಇದೇ ಪ್ರಯೋಗವೇ ದೊರೆಯುತ್ತದೆ. ಪ್ರತಿಮಾಡಿದವರು ಮರೆತಾದರೂ ಒಂದು ಸಲವೂ ಬೇರೆ ಪ್ರಯೋಗವನ್ನು ಮಾಡುವುದಿಲ್ಲ. ಈ ವಿಧವಾದ ಪ್ರಯೋಗವು ಒಂದು ಕಾಲದಲ್ಲಿ ಇದ್ದಿತೆಂಬುದಕ್ಕೆ ಶಾಸನಗಳಲ್ಲಿಯೂ ಇತರ ಗ್ರಂಥಗಳಲ್ಲಿಯೂ ಆಧಾರವುಂಟು. ಆದಕಾರಣ ಈ ಪ್ರಯೋಗವು ಹರಿಹರನದೇ ಆಗಿದ್ದರೂ ಇರಬಹುದು. ಏನೇ ಇಗಲಿ, ಅದನ್ನು ತಿದ್ದುವುದು ನ್ಯಾಯವೋ ಅಲ್ಲವೋ ಎಂಬ ಸಂದೇಹಬರುವುದರಿಂದ ಅದನ್ನು ಹಾಗೆಯೇ ಉಳಿಸಿರುತ್ತೇವೆ. ಕುಡು, ಕೊಡು ; ಬರ್ಪ, ಬಪ್ಪ ; ಪಿಂಗು, ಹಿಂಗು ;-ಒಡೆ,-ಅಡೆ ;-ಒಳ್,-ಒಳು ; -ಅರ್,-ಅರು—ಹೀಗೆ ಒಂದೇ ಪದದ ಅಥವಾ ಪ್ರತ್ಯಯದ ಭಿನ್ನ ರೂಪ ಗಳು ಈ ಗ್ರಂಥದಲ್ಲಿ ಒಂದೊಂದು ಒಂದೊಂದು ಕಡೆ ಬರುತ್ತವೆ. ಇಂಥ ಸಂದರ್ಭಗಳಲ್ಲಿ ಎರಡು ರೂಪಗಳನ್ನೂ ಉಳಿಸಿದೆ. ಆದರೆ ಕೆಲವು ಅರ್ವಾ ಚೀನಪ್ರಯೋಗಗಳು ಗ್ರಂಥಕರ್ತನವಲ್ಲದಿರಬಹುದೆಂದು ತೋರಿದ್ದರಿಂದಲೂ ಅವು ಗಳ ಪ್ರಾಚೀನರೂಪಗಳೂ ಮೂಲಪ್ರತಿಗಳಲ್ಲಿ ಕಂಡುಬರುವುದರಿಂದಲೂ ಅಂಥ ಸಂದರ್ಭಗಳಲ್ಲಿ ಪ್ರಾಚೀನರೂಪಗಳನ್ನು ಮಾತ್ರ ಅಂಗೀಕರಿಸಿದ್ದೇವೆ. ಒಟ್ಟಿನಲ್ಲಿ ಗ್ರಂಥಪರಿಷ್ಕರಣವಿಚಾರದಲ್ಲಿ ಯಾವ ಒಂದು ನಿಯಮವನ್ನಾಗಲಿ ಪಟ್ಟು ಹಿಡಿದು ಅನುಸರಿಸಲು ಸಾಧ್ಯವಾಗಲಿಲ್ಲ.

ಹಸ್ತಲಿಖಿತಪ್ರತಿಗಳಲ್ಲಿ ವಿರಾಮವನ್ನು ಸೂಚಿಸುವುದಕ್ಕೆ ಇಷ್ಟಬಂದ ಕಡೆ ಗಳಲ್ಲಿ ಒಂದು ಗೀಟನ್ನು ಉಪಯೋಗಿಸಿದ್ದಾರೆ. ಇದಕ್ಕೆ ಬದಲಾಗಿ ಈಗ ರೂಢಿ ಯಲ್ಲಿರುವ ವಿರಾಮಸಂಜ್ಞೆಗಳನ್ನು ಸಂದರ್ಭೋಚಿತವಾಗಿ ಉಪಯೋಗಿಸಿದ್ದೇವೆ. ಹೀಗೆ ಮಾಡುವಾಗ ವಿಸಂಧಿಯನ್ನು ತರಬೇಕಾದದ್ದು ಆವಶ್ಯಕವಾಯಿತು. ಮೂಲಪ್ರತಿಗಳಲ್ಲಿಯೇ ವಿಸಂಧಿಯ ಪ್ರಯೋಗಗಳು ತಕ್ಕಮಟ್ಟಿಗೆ ಕಂಡು

ಬಂದದ್ದರಿಂದ ಹೀಗೆ ಮಾಡುವುದು ಅಸಾಧುವಲ್ಲವೆಂದು ತೋರಿತು. ಗದ್ಯದಲ್ಲಿರುವ ಸ್ಥಲಗಳಲ್ಲಿ ಭಾಗಗಳಾಗಿ ವಿಂಗಡಿಸಿರುವುದು ಕಾಗದದ ಪ್ರತಿಯಲ್ಲಿ ಕಂಡುಬರುತ್ತದೆ. ಆ ವಿಧವಾದ ವಿಭಾಗವು ಕೆಲವು ಕಡೆ ತೃಪ್ತಿಕರವಾಗಿರಲಿಲ್ಲ; ಆದಕಾರಣ ವಿಷಯಕ್ಕೆ ಅನುಗುಣವಾಗಿ ವಿಭಾಗಮಾಡಿದ್ದೇವೆ. ಗದ್ಯದಂತೆ ಪದ್ಯದಲ್ಲಿಯೂ ವಿಷಯವಿಭಾಗವನ್ನು ವಾಚಕರ ಸೌಕರ್ಯಕ್ಕಾಗಿ ಸೂಚಿಸಿದ್ದೇವೆ.

ಈ ಗ್ರಂಥವನ್ನು ಪ್ರಕಟಿಸುವುದಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳಲ್ಲಿಯೂ ನನ್ನ ಜತೆಗೆ ತಮ್ಮ ಶ್ರಮವನ್ನು ಲಕ್ಷಿಸದೆ ಸಮಭಾಗಿಗಳಾಗಿ ಉತ್ಸಾಹದಿಂದ ಕೆಲಸಮಾಡಿ ಸಹಾಯಮಾಡಿದ್ದಕ್ಕಾಗಿ ಮಹಾರಾಜರವರ ಕಾಲೇಜಿನ ಕನ್ನಡದ ಲೆಕ್ಚರರ್ ಮ||ರಾ|| ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರಿಗೂ ಓಲೆಯ ಪ್ರತಿಯಲ್ಲಿರುವ ರಗಳೆಗಳನ್ನು ಓದುವುದರಲ್ಲಿಯೂ ಪೀಠಿಕೆಗೆ ಬೇಕಾದ ವಿಷಯಗಳನ್ನು ಸಂಗ್ರಹಿಸುವುದರಲ್ಲಿಯೂ ಇತರ ವಿಧಗಳಲ್ಲಿಯೂ ಸಹಾಯ ಮಾಡಿದ್ದಕ್ಕಾಗಿ ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿರುವ ಮ||ರಾ|| ಡಿ. ಎಲ್. ನರಸಿಂಹಾಚಾರ್ಯ, ಎಂ.ಎ. ಅವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಓರಿಯೆಂಟಲ್ ಲೈಬ್ರರಿಯ ಹಸ್ತಲಿಖಿತಪ್ರತಿಗಳಲ್ಲಿ ಅಡಗಿದ್ದ ಈ ಗ್ರಂಥವನ್ನು ಮೊದಲು ಕಂಡುಕೊಂಡು ಇದನ್ನು ಪ್ರಕಟಿಸಬೇಕೆಂಬ ಪ್ರೇರಣೆಯನ್ನು ನನ್ನಲ್ಲುಂಟುಮಾಡಿ ಇದನ್ನು ಮುದ್ರಣಕ್ಕೆ ಸಿದ್ಧಪಡಿಸುವಾಗಲೂ ಪೀಠಿಕೆಯನ್ನು ಬರೆಯುವಾಗಲೂ ಆವಶ್ಯಕವಾದ ಅನೇಕ ಸಲಹೆಗಳನ್ನು ಕೊಟ್ಟ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಗೆ ಚಿರಋಣಿಯಾಗಿರುತ್ತೇನೆ. ನಾನು ಕೊಟ್ಟ ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಈ ಗ್ರಂಥವನ್ನು ಅಂದವಾಗಿಯೂ ಉತ್ತಮವಾಗಿಯೂ ಮುದ್ರಣಮಾಡಿಕೊಟ್ಟದ್ದಕ್ಕಾಗಿ ಮೈಸೂರು ವೆಸ್ಲಿಯನ್ ಮಿಷನ್ ಪ್ರೆಸ್ಸಿನವರಿಗೆ ಕೃತಜ್ಞನಾಗಿದ್ದೇನೆ.

ಟಿ. ಎಸ್. ವೆಂಕಣ್ಣಯ್ಯ.

# ಬಸವರಾಜದೇವರ ರಗಳೆ

---

## ಮೊದಲನೆಯ ಸ್ಥಲ

ಶ್ರೀಮದ್ಬ್ರಹ್ಮಾಚ್ಯುತೇಂದ್ರಾ[1]ಸು[1]ರಗುರುಸುಮನೋಮೌಳಿವಿನ್ಯಸ್ತಪಾದಂ
ಹೇಮಾಗಾಗಾರಸೀಶಂ ಮುನಿಜನಹೃದಯಾಂಭೋಜವಾಸಂ ಭವಾನೀ-|
ವಾಮಾಂಗಾಲಿಂಗ[2]ನಂ ಭೂ[2]ಸುರನಿಧಿ ಮೆಱೆದಾ ಭೂಮಿಯೊಳ್ ಚಂದ್ರಚೂಡಂ
ಪ್ರೇಮಂ ಕೈಮಿಕ್ಕು ಪಂಪಾಪುರಪತಿ ಬಸವಂಗೊಲ್ದು ಸಂತೋಷದಿಂದಂ || ೧*

ಶ್ರೀಮೇರುಮಧ್ಯದೊಳಗೊಪ್ಪುತೆ ವಿಳಾಸದಿಂ
ಪ್ರೇಮದಿಂ ಹಂಪೆಯ ವಿರೂಪಾಕ್ಷನೊಪ್ಪದಿಂ |
ಅಪ್ರತಿಮನಾನಂದಮೂರ್ತಿಯೊಪ್ಪುತ್ತಿರಲು
ಸರ್ವಭೂಷಣನೊಪ್ಪದಿಂದೊಪ್ಪಿ ಕುಳ್ಳಿರಲು |
ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು
ರಂಜಿಸುವ ಪುಲಿಚರ್ಮದಘವನೊಪ್ಪುತ್ತಿರಲು |
ಆತನ ವಿಳಾಸವದನೇನೆಂಬೆನೆಸೆದಿರಲು
ನೂತನವಿಳಾಸದಿಂ ಗಿರಿಜೆ ವಾಮದೊಳಿರಲು |
ಇಂತು ಸರ್ವೇಶ್ವರಂ ಹರುಷದಿಂದೊಪ್ಪಿರಲು
ಶಾಂತಾರ್ಕಕೋಟಿಪ್ರಭಾಪುಂಜನೆಸೆದಿರಲು |
ಸೀಸರಸ್ವತಿಯರಂದೊಲಿದು ಚಾಮರವಿಕ್ಕೆ
ಅರಸೆ ಇಂದ್ರಾಣಿಯರು ನಲಿದು ಸೀಗುರಿಯಿಕ್ಕೆ |
ರುದ್ರಕನ್ನೆಯರೊಲಿದು ಸಿಂಗರಿಸಿ ಕುಳ್ಳಿರಲು
ಉದ್ದಂಡನುಂ ವೀರಭದ್ರನುಂ ಕುಳ್ಳಿರಲು |

---

[1] ಮ ? ;   [2] ಸಾಭಾ (ಕ.)

ಗಣಪನುಂ ಸ್ವಾಮಿಯುಂ ಕೆಲಬಲದೊಳೊಪ್ಪಿರಲು
ಗಣನಿಕರ ಘುಳುಘುಳಿಸುತುರವಣಿಸಿ ಕುಳ್ಳಿರಲು|
ಬ್ರಹ್ಮಾದಿನಿಚಯಮಂತೊಂದೆಸೆಯೊಳೊಪ್ಪಿರಲು
ಅಮ್ಮಮ್ಮ ಹರಿನಿಕರ [1]ಹರಷಿನಿ[1]ಂದೊಪ್ಪಿರಲು|
ಮನುಗಳುಂ ಮುನಿಗಳುಂ ಸಿದ್ಧವಿದ್ಯಾದಿಗಳು-
ಮನುಪಮನ ಕೆಲಬಲದೊಳೊಪ್ಪಿ ತೋಱುತ್ತಿರಲು|
ವೃಷಭಮುಖ ಹರುಷದಿಂದೊಪ್ಪಿ ಕುಳ್ಳಿರುತಿರಲು
ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು|
ಮುಂತೆ ಕಿನ್ನರರು ನವರಸದಿ ಪಾಡಲ್ಕಾಗ-
ನಂತರಂ ಭೃಂಗೀಶ ನರ್ತನಕೆ ನಿಂದಾಗ|
ಹೊಸ ಪರಿಯ ಗತಿಗಳಂ ನಟಿಸಿ ತೋಱುತ್ತಮಿರೆ
ಅಸಮಾಕ್ಷ ಕರುಣದಿಂ ನೋಡಿ ನಸುನಗುತಮಿರೆ|
    ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು
ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು
ತಂದೊರ್ವ ಮಾಲೆಗಾಱಂ ಭರದಿ ಕೊಡಲಲ್ಲಿ
ಮುಂದಿರ್ದ ವೃಷಭಮುಖನಂ ಕರೆವುತಿರಲಲ್ಲಿ|
ಹರುಷದಿಂದೈತಂದು ಕೈಮುಗಿದು ನಿಂದಿರಲು
ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು|
ನೀನೀ ಪ್ರಸಾದಮಂ ಶರಣತತಿಗೀಯೆನುತೆ
ಮಾನನಿಧಿ ವೃಷಭ[2]ಮುಖಗಂದೀ[2]ಯೆ ಪುಳಕಿಸುತೆ|
ಮುಂದೆ ಪರಮೋತ್ಸಾಹದಿಂದುಕ್ಕಿ ಮೈಯಿಕ್ಕಿ
ಇಂದುಮೌಳಿಯ ಕೃಪೆಗೆ ಮತ್ತೊಮ್ಮೆ ಮೈಯಿಕ್ಕಿ|
ಕುಣಿವುತಂ ಕುಕಿಲಿಱುವುತಂ ಪರ್ವಿ ಕೂರ್ವುತಂ
ತ್ರಿಣಯನನ ಬೆಸನನಾಂ ಪಡೆದೆನೆನುತುರ್ವುತಂ|

---

[1] ಹರುಷದಿ (ಖ.); [2] ರಾಜಂಗೀ (ಖ.)

ಪರವಶೀಭೂತನಾಗುತ್ತೆ ಮಱಹಂ ಹೊತ್ತು
ಹರುಷದಿಂ ದೇವಿಯರ್ಗಿತ್ತು ಗಣಪತಿಗಿತ್ತು।
ಬಿರುದ ಗಣನಿವಹಕ್ಕೆ ಹರಿಯಜಸುರರ್ಗಿತ್ತು
ವರಮುನಿಜನಕ್ಕೆ ಮನುನಿವಹಕ್ಕೆ ನಲಿದಿತ್ತು।
ಶಿವಪುತ್ರನಂ ಸ್ಕಂದದೇವನಂ ಮಱೆವುತಂ
ತವೆ ಸಭೆಯೊಳಿರ್ದರ್ಗೆ ವೃಷಭಮುಖನೀವುತಂ।
ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ
ಅಲ್ಲಿಯೆನಗೀಯನೆಂದಾ ಸ್ವಾಮಿ ಬಿನ್ನೈಸೆ।
ಕೊಟ್ಟೆನೆಂದಾ ವೃಷಭಮುಖನಲ್ಲಿ ನುಡಿವುತಿರೆ
ಕೊಟ್ಟುದಿಲ್ಲೆನಗೆ ಪುಸಿಮಾತದೇಕೆನುತಮಿರೆ।
ಎನೆ ವೃಷಭಮುಖನಲ್ಲಿ ಕೊಟ್ಟೆನೆರಡಿಲ್ಲಯ್ಯ
ನಿನಗೆ ಕೊಡದಿರ್ಪನೇ ಕೇಳು ಕೇಳೆನ್ನಯ್ಯ।
ಎಂದಡೆ ಕುಮಾರಕಂ ತಂದೆಯ ಮೊಗಂನೋಡಿ
ಒಂದುವಂ ನುಡಿಯಲಱಿಯದೆ ನೋಡುತಿರೆ ಬಾಡಿ।
ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು
ನಗುತೆತ್ತಿ ತ[1]ಕ್ಕೈ[1]ಸುತಂ ನಿರೋಧಂಗೊಂಡು।
ಕಂಡಯ್ಯ ವೃಷಭಮುಖ ದೇವಿಯರು ನೋಡುತಿರೆ
ತಂಡತಂಡದ ಗಣೇಶಪ್ರತತಿ ನೋಡುತಿರೆ।
ಹರಿಯಜರ ಸುರ[2][ರ] ಸುರರಾಜರ ಸಮಕ್ಷದೊಳು
ಅರವರಿಸದೀ ಸಭೆಯೊಳೆನ್ನಯ ಸಮಕ್ಷದೊಳು।
ಹುಸಿನುಡಿವರೇ ಕುಡದೆ ಎನ್ನಯ ಕುಮಾರಂಗೆ
ಎಸೆವ ನಿಜಭಕ್ತಿಭೂಷಣನೆನಿಪ ವೀರಂಗೆ।
ಎಮಗೆ ಕುಡದಿರ್ದಡಂ ಸೈರಿಸುವೆವಾವಯ್ಯ
ವಿಮಳಶಿಶುವಿಂಗೆ ಹುಸಿನುಡಿಯೆ ಸೈರಿಸೆವಯ್ಯ।

---

1 ಕ್ಕವಿ (ಕ.); 2 ಪ (ಕ. ಖ.)

ಇದಱಿಂದ[1][ವೊ]ಂದು ಜನನಂ ನಿನಗೆ ದೊರಕಿತ್ತು
ಮುದದಿಂದ ಹೋಗಯ್ಯ ಜನನವಂ ನೀ ಹೊತ್ತು।
ಧರಣಿಯೊಳು ವೃಷಭಮುಖ ಹುಟ್ಟೆಂದು ಬೆಸಸುತಿರೆ
ಕೊರಗಿ ಕಳೆಗುಂದಿ ಬಿನ್ನೈಸಿದಂ ಕೇಳುತಿರೆ।
ಇಂದುಧರ ಚಿತ್ತೈಸೆಸುತ್ತಂದು ಕೈಮುಗಿದು
ತಂದೆ ಶರಣಾಗು ಶರಣೆನಗೆ ಹುಟ್ಟಲ್ಕರಿದು।
ಕಾಮಾರಿ ಷಡುವರ್ಗದುಬ್ಬರಂ ಧರೆಯಲ್ಲಿ
ಸೋಮಧರ ತಾಪತ್ರಯದ ಜೇಗೆ ಪಿರಿದಲ್ಲಿ।
ಹುಸಿ [2]ದ[2]ಂಬು ಹಿಂಸೆ ಮೂರ್ಖತೆಯುಂಟು ಧರೆಯೊಳಗೆ
ವಶವಲ್ಲದಾ[3]ಲೀಢ[3]ವನ್ಯಾಯವಿಳೆಯೊಳಗೆ।
ಅಲ್ಲಿ ಜನಿಯಿಸಿ ಬಳಿಕ್ಕೆಂದು ಬಪ್ಪೆಂ ದೇವ
ಎಲ್ಲ ತೆಱದಿಂ ನಿಮಗೆ ದೂರವಪ್ಪೆಂ ದೇವ।
ಕರುಣಿಪುದು ಜಲಶಯನನಯನಚರಣಾಭರಣ
ಶರಣಸಂಘಾತಸಂಸಾರಭಯನಿರುಹರಣ।
ಎನೆ ಶಿವಂ ನಸುನಗುತ್ತಂಜಬೇಡೆಲೆ ಮಗನೆ
ನಿನಗೆ ಹಿತ[4][ನಾ]ಗಿ ಸಖ[4][ನಾ]ಗಿ ಬಪ್ಪೆಂ ಮಗನೆ।
ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು
ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು।
ಗಣಸಮಕ್ಷದ ಪುಸಿಗೆ ಶರಣರ್ಗೆ ಮಾಡುತ್ತೆ
ಅಣಿಯರದೊಳೆನ್ನ ಭಕ್ತಿಯನಿಳೆಗೆ ಕೂಡುತ್ತೆ।
ಎನ್ನ ಪ್ರಸಾದಸಾಮರ್ಥ್ಯಮಂ ತೋಱುತಂ
ಮನ್ನಣೆಯೊಳಿಲ್ಲಿಗೈತಪ್ಪುದಿದು ನಿರ್ಮಿತಂ।
ವೃಷಭಮುಖ ವೃಷಭನಾಮಂ ಪೆಸರ್ ನಿನಗಾಗೆ
ವೃಷಭೇಂದ್ರನಲ್ಲಿ ನಿನಗಿತುಪರಕೆ ಗುರುವಾಗೆ।

---

[1] ಲೊ (ಕ ಖ.); [2] ಡ (ಕ.); [3] ರಿದ್ರ (ಖ.); [4] ವಾ (ಕ. ಖ.)

ಮೆಱೆದಪಂ ಪೋಗಯ್ಯ ಪೋಗೆಂದು ಬೆಸಸುತಿರೆ
ಕಱೆಗೊರಳನಕ್ಕಱಿಂ ಕರುಣದಿಂ ಕಳುಪುತಿರೆ |
ವೃಷಭಮುಖನಲ್ಲಿ ಹರನಾಜ್ಞೆಯಂ ಕೈಕೊಂಡು
ವೃಷಭರಾಜನ ಕರುಣಮುಮನೊಚ್ಚತಂಗೊಂಡು |
ಶರಣರಂ ಬಲವಂದನುಜ್ಞೆಯಂ ಕೈಕೊಂಡು
ಕರುಣಮಂ ತೋಱುತೆ ಕುಮಾರನಂ ಬೀಳ್ಕೊಂಡು |
ಬಂದು ಭೂಲೋಕದೊಳು ಕೀರ್ತಿಯಂ ಪಡೆದಿರ್ಪ
ಸಂದಣಿಪ ವಿಪ್ರಸಂತಾನದಿಂದಿಡಿದಿರ್ಪ |
ಶಿವಪುರಾಣಾಗಮಕುಳಂಗಳಿಂದೆಸೆದಿರ್ಪ
ಶಿವ ಶಾಸ್ತ್ರಘೋಷಸಂಗೀತದಿಂದಿಡಿದಿರ್ಪ |
ಅಗ್ರಹಾ[1]ರಂ[1] ಬಾಗೆವಾಡಿಯೊಳಗೆಸೆದಿರ್ಪ
ಅಗ್ರೇಶ್ವರಂ ಕಮ್ಮೆ ಕುಲದಿಂದೆ ಮೆಱೆದಿರ್ಪ |
ವಿಪ್ರನಿರ್ಪಂ ಮಾದಿರಾಜನಾತನ ಸತಿಯು
ಅಪ್ರತಿಮಮಾದಾಂಬೆಯೆಂದೆಂಬ ಗುಣವತಿಯು |
ಅತಿಮಾನಿಯತಿಜ್ಞಾನಿಯೆಂದೆನಿಪ್ಪಾ ಸತಿಯು
ಪತಿಭಕ್ತೆಯುದರದೊಳು ಪುಗಲಲ್ಲಿ ಗುಣವತಿಯು |
ನಡೆ ತಳುವಿ ತಳ್ಕಿಕ್ಕೆ ಕೂಡೆ ಭಾವಂಗಳಿಂ
ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ |
ಮಾರನ ದೊಣೆಯನಿಳಿಸಿ ಕಣೆಕಾಲ್ಗಳೊಪ್ಪುತಿರೆ
ಊರುದಂಡಂ ರಂಭೆಗಳ ಸೊಬಗನಿಳಿಸುತಿರೆ |
ತ್ರಿವಳಿ ಮೈಗರೆಯೆ ಹೊಕ್ಕುಳ ಗುಣ್ಪು ಹೊಱಸೂಸೆ
ನವನೀಳಕಾಂತಿಯಿಂದಿದಿರೇಱುತಿರೆ ಬಾಸೆ |
ನಡು ಹೊಂಗಿ ಕಿಳ್ಪೊಡೆಯದೊಪ್ಪದಿಂ ಹಿಗ್ಗುತಿರೆ
ಮೃಡನ ಭಕ್ತನ ಪುಣ್ಯಸತಿಯುದರವೊಪ್ಪುತಿರೆ |

---

[1] ರದ (ಖ.)

ಕಮಳಮುಕುಳಂಗಳೊಳು ಭೃಂಗಂಗಳಿಪ್ಪಂತೆ
ಅಮರ್ದು ಕಪ್ಪೇಱೆ ಕುಚಯುಗಳಚೂಚುಕ[1][ವ]ಂತೆ|
ಕಕ್ಷಪುಟದಲ್ಲಿ ಕತ್ತುರಿಯ ಹೊಗರೆತ್ತುತಿರೆ
ಅಕ್ಷಿಗಳು ಕರುಣರಸಮಂ ಹೊತ್ತು ಬಳಲುತಿರೆ|
ಕುಂತಳಂ ಕೊರ್ಬಿಂ ಕವಲ್ತು ಕುಡಿನಿಮಿರುತಿರೆ
ಅಂತರಂಗದ ಗರ್ಭವೊಡನೊಡನೆ ಬೆಳೆವುತಿರೆ|
ಅಂಗಲತೆ ನಯವೇಱೆ ಬೇಱೊಂದು ಚೆಲುವಾಗೆ
ಮಂಗಳಾನನವಲರ್ದ ರಾಜೀವದಂತಾಗೆ|
ಇಂತು ನವಮಾಸವಾಕೆಯೊಳಾಗೆ ಸನ್ನುತಂ
ಅಂತಃಸ್ಥಳದೆ ಪುಣ್ಯಶಿಶು ತೊಳಗಿ ಹೊಳೆವುತಂ|
ಮುಕುರದೊಳು ಮಾರ್ಪೊಳೆವ ಚಂದ್ರಮಂಡಲದಂತೆ
ಸುಕರಾಂಬುವೊಳ್ ಪೊಳೆವ ಹಂಸ[2]ಶಾ[2]ಬಕದಂತೆ|
ಪೊಳೆದು ಥಳಥಳಿಸುತಂ ಪೊಱಮಡಲ್ ಬಗೆಗೊಂಡು
ಇಳೆಗೆ ಶಿವಭಕ್ತಿಯಂ ತೀವಲ್ ಮನಂಗೊಂಡು|
ಚಿಪ್ಪಿನೊಳ್ ಮುತ್ತು ಕಾಸಾರದೊಳ್ ಪಂಕಜಂ
ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ|
ಕೇತಕೀಕುಸುಮದಿಂ ರುಚಿರತರಪರಿಮಳಂ
ಶೀತಕರನಿಂ ಸಾಂದ್ರತರಕೌಮುದೋಜ್ಜ್ವಳಂ|
ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಶುವಲ್ಲಿ
ಪುಟ್ಟಿದಂ ಸಂಸಾರಸುಖದ ಲೀಲೆಯಿನಲ್ಲಿ|
ಸುಮುಹೂರ್ತವೇ ಗಂಡುರೂಪಾದ ತೆಱನಾಗೆ
ಅಮಮ ಕಾರಣಿಕಶಿಶು ಜನಿಯಿಸಿದನಸುವಾಗೆ|
ಆಗಳಾ ಪುತ್ರಂಗೆ ಜಾತಕರ್ಮವ ಮಾಡಿ
ರಾಗದಿಂ ಬಸವನೆಂಬಭಿಧಾನ[3]ಮಂ ಕೂ[3]ಡಿ|

[1] ವಿ (ಕ.ಖ.); [2] ಸಾಂ (ಖ.); [3] ವಂ ಮಾ (ಖ.)

ಹರನಿತ್ತ ಪೆಸರೆ ವಂಶಾವಳಿಯ ಪೆಸರಾಗೆ
ಧರೆಯ ಭಕ್ತಾಳಿಗನಿಮಿತ್ತವೃತ್ಸವವಾಗೆ|
★ ಲಿಂಗಮಂ ತೋಱೆ ಕಣ್ದೆಱೆದು ಸುಖಿಯಾಗುತಂ
ಲಿಂಗಪ್ರಸಾದಮಂ ಕೊಂಡು ಹೊರೆಯೇಱುತಂ|
ಮಾತೆಯ ಮನೋರಾಜ್ಯ ಪಿತನ ಕಣ್ಗಳ ಸೊಂಪು
ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು|
ದಿಟ್ಟಿ ತೀವಲು ನೋಳ್ಪ ಜನಕೆ ತಾನಭಿಮುಖಂ
ಮುಟ್ಟುವರ ಮುದ್ದು ಮುದ್ದಾಡಿಪರ ನಿಜಸುಖಂ|
ಸೋಗಿಲ ಸುಧಾಕಿರಣವಂಗೈಯ ಮಾಣಿಕಂ
ಸಾಗಿಪರ ಪರಬೊಮ್ಮ ವ[1]ರ್ತಿ[1]ಸುವ ಕೌತುಕಂ|
ನೋಡುವರ ನಯನಸುಧೆ ನೋಂಕುವರ ಪುಳಕತತಿ
ಬೇಡುವರನರ್ಘ್ಯ[2]ವ[2]ಪ್ಪುವರ ಪುಣ್ಯದ ಸುಗತಿ|
ಅರಳೆಲೆಯ ಸುಮ್ಮಾನಿ ಸುಳಿಗುರುಳ್ಗಳಭಿಮಾನಿ
ಗುರುತರಶಿವಧ್ಯಾನಿ ಮುದ್ದುನಗೆಗಳ ದಾನಿ|
ಅಲರ್ಗಣ್ಗಳಮರ್ದುಗಂ ತೊದಳ್ನುಡಿಯ ತವಕಿಗಂ
ಸಲಿವ ಮಾಗಾಯ ನವನರ್ತನದ ಹಸ[3]ನಿ[3]ಗಂ|
ಒಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಿಗಂ
ನಳನಳಿಪ ಲಾವಣ್ಯದಿಂದೆಸೆವ ಬಣ್ಣಿಗಂ|
ಹೆಱೆನೊಸಲ ನಾಯಕಂ ಶಿಶುವೇಷದುನ್ನತಂ
[4]ಮೆಱೆದಿಪ್ಪ ಬಾಯ್ದೆರೆಯ ಗರದನುವಲೀಸುತಂ[4]| (?)
[5][ಉ]ಡೆವಣಿಯ ತೊಡವು ಘಲಘಲಿಸುವಂದುಗೆಯಾನೆ
ನೃಪನ ಸುತನುಂ ದ್ವಿಜತನೂಜನೆಂದುಂ ತಾನೆ|

---

1 ತ್ಥಿ (ಕ.); 2 ಪೊ (ಕ.); 3 ಲಿ (ಖ.); 4 ನೆಱೆವಿರ್ಪ ಬಾಯ್ದೆಱೆಯ ಕರದನಾವಲಿಯುತಂ (ಖ.); 5 ಒ (ಕ.), ಎ (ಖ.)

ತಾನಾಗಿ ಬಾಲಲೀಲೆಯು ಬಸವನೊಪ್ಪಿದಂ
ನಾನಾವಿನೋದನಿಧಿ ಬಸವಣ್ಣನೊಪ್ಪಿದಂ ||

ಬಸವಂ ಪರಸಮಯಕ್ಕು-
ಬ್ಬಸವಂ ಮಾಡುತೆ ಸಮಸ್ತ ಶರಣಾವಳಿಗಂ |
ಬಸವಂ ಮಾಡುವೆನೆಸುತವೆ
ಬಸವಂ ನಲಿಯಲ್ ಸಮಂತು ಬೆಳೆವುತ್ತಿರ್ದಂ || ೨*

# ಎರಡನೆಯ ಸ್ಥಲ

ಸುರಕುಜದಂಕುರಂ ಶಶಿಕಳಾಕಿರಣಂ ತರುಣಾರ್ಕಮಂಡಲಂ
ಸುರಭಿಯ ಶೀಲವೆಂತವಱವೋಲ್ ನಯದಿಂ ಸುಕುಮಾರವೃತ್ತಿಯಿಂ-|
ದುರುತರತೇಜದಿಂ ಸುಕೃತಮೂರ್ತಿಯಿಸೊಪ್ಪಿದನೀ ಧರಿತ್ರಿಯೊಳ್
ವರಶಿಶುವಾಗಿ ರಾಜಿಸಿದನಿಂತೊಲವಿಂ ಬಸವಣ್ಣನಾಯಕಂ || ೧*

ಇಂತು ಶುದ್ಧಾಂಗನಾಗಿ [1]ಸುಖಿ[1]ಯಾಗಿ ಧಾರುಣಿಗೆ ಕಾರಣಿಕನಪ್ಪ ಬಸವಂ ಸಂಗಸುಖದಿಂದಿರ್ಪಲ್ಲಿ ; ನೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ ಹರನ ಬೆಸನಂ ಹೊತ್ತು ಪಲವು ಕಾರಣದಿಂ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವರಾಜಂಗೆ ತಾಯ್ತಂದೆಗಳಿಲ್ಲೆಂಬುದನಱಿಪುವಂತೆ, ಶಿವಭಕ್ತನುಮಂ ಶಿವಭಕ್ತೆಯುಮಂ ಶಿವನಾಜ್ಞೆಯಿಂ ಕೈಲಾಸಕ್ಕೆ ಕೊಂಡೊಯ್ಯೆ ;

ಬಸವರಾಜಂ ಪುಸಿಯ ತಾಯ್ತಂದೆಗಳ್ ಪೋದುದಂ ಕಂಡಾದರಂಮಿಕ್ಕು ಸಂಸಾರದ ಭಾರವಿಳಿದು ನಲಿನಲಿದಾಡಿ, ಶಿವಭಕ್ತಿ ಮುತ್ತಂತಿರ್ದ ಮುತ್ತಜ್ಜಿಯ ಪಕ್ಕದೊಳು ಶಿವಪ್ರಸಾದಸಂತುಷ್ಟ+ಹೃದಯನಾಗಿ ನಾಲ್ಕೆರಡು ವರುಷಂ ಸುಖದೊಳಿರೆ ; ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ ಪಂಚಾಕ್ಷರಿಯ ಮಂತ್ರಕ್ಕೆ ಸಾಮರ್ಥ್ಯಂ ಪೊದ್ದುವಂತೆ ಶಿವಲಿಂಗಮುಂ ನವಪೂಜೆಯಡರ್ವಂತೆ ಬಾಲ್ಯವಿಮೋಚನವಾಗಿ ಯೌವನವಾಲಿಂಗಿಸೆ, ಪದಿನಾಱು ವತ್ಸರದೊಡನೆ ನವಯೌವನಂ ಸಾರ್ದು ಬಸವರಾಜನ ರೂಪು ಸೌಂದರ್ಯವೆಂತೆಂದೊಡೆ—

ಶಿವಪ್ರಸಾದವಂ ಪೊತ್ತು ನಿತ್ತರಿಸುವಂ ತಾನೊರ್ಬನೆಂಬುದಂ ತೋರ್ಪಂತೆ ಮಲ್ಲಿಗೆ ಮೊಲ್ಲೆ ಜಾಜಿ ಕೇತಕಿ ಮೊದಲಾದ ಕುಸುಮಕುಲಮನಾಂತು ಮೆಱೆವ ಬಟ್ಟದುಱುಂಬಿನ, ಮತ್ತಂ ಗಂಗೆಯುಂ ಹೊತ್ತ

---

[1] **ಸುರಭಿ (ಖ.) ; + ಪುಷ್ಟ (ಖ.)**

